# ಬ್ಯಾಂಕಿಂಗ್ ಪ್ರಪಂಚ

ಸಂಪಾದಕರು

ಎಚ್ಚೆಸ್ಕೆ

ಜೂನ್



೧೯೮೦

ಸಮನ್ವಯ ಸಮಿತಿ (ರಿ.)
(ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು)
ಭಾರತೀಯ ಸ್ಟೇಟ್ ಬ್ಯಾಂಕ್, ಬೆಂಗಳೂರು ನಗರ ಶಾಖೆ
ಬೆಂಗಳೂರು 560 002

ಹಣ, ಬ್ಯಾಂಕಿಂಗ್ ವಿಚಾರಗಳಿಗೆ ಮೀಸಲಾದ ಅರ್ಧವಾರ್ಷಿಕ

# ಸಮನ್ವಯ ಸಮಿತಿ

(ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು)

ಕರ್ನಾಟಕ ಸಂಘಗಳ ನೋಂದಣಿ ಅಧಿನಿಯಮ 1960ರ ಪ್ರಕಾರ ನೋಂದಾಯಿಸಿದೆ. ಕ್ರಮಸಂಖ್ಯೆ 170-80-81

## ಉದ್ದೇಶಗಳು

ಕರ್ನಾಟಕದಲ್ಲಿರುವ ಭಾರತೀಯ ಸ್ಟೇಟ್ ಬ್ಯಾಂಕಿನ ಶಾಖೆಗಳಲ್ಲಿ ಕನ್ನಡ ಸಂಘಗಳ ಸ್ಥಾಪನೆಗೆ ನೆರವಾಗುವುದು, ತನ್ಮೂಲಕ ಕನ್ನಡ ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳನ್ನು ತೀವ್ರ-ಗೊಳಿಸುವುದು.

ಬ್ಯಾಂಕಿಂಗ್ ವಿಷಯದ ಬಗ್ಗೆ ಒಂದು ನಿಯತಕಾಲಿಕವನ್ನು ಪ್ರಕಾಶಿಸುವುದು ಮತ್ತು ತತ್ಸಂಬಂಧಿ-ಯಾದ ವಿಷಯಗಳ ಬಗ್ಗೆ ನಿಘಂಟು ಮತ್ತು ಇತರ ಪುಸ್ತಕಗಳನ್ನು ತಜ್ಞರಿಂದ ಬರೆಯಿಸಿ ಪ್ರಕಟಿಸುವುದು.

ಶಾಖಾ ಕನ್ನಡ ಸಂಘಗಳು ಕೈಗೊಳ್ಳಬಹುದಾದ ಕಾರ್ಯಕ್ರಮಗಳ ಬಗ್ಗೆ ಸಲಹೆ, ಸಹಕಾರ ಮತ್ತು ಸಹಾಯ ನೀಡುವುದು.

ಕನ್ನಡ ಸಾಹಿತ್ಯ, ಕಲೆ, ಜನಪದ ಇತ್ಯಾದಿಗಳಿಗೆ ಸಂಬಂಧಿಸಿದ ವಿಷಯಗಳ ಬಗ್ಗೆ ಕನ್ನಡ ಸಂಘಗಳಿರುವ ಶಾಖೆಗಳಲ್ಲಿ ವಿಚಾರಗೋಷ್ಠಿ, ಉಪನ್ಯಾಸ ಇತ್ಯಾದಿಗಳನ್ನು ಏರ್ಪಡಿಸುವುದು ಮತ್ತು ಇನ್ನಿತರ ಪೂರಕ ಚಟುವಟಿಕೆಗಳನ್ನು ಸಮಿತಿಯು ನೇರವಾಗಿಯೂ, ದತ್ತಿನಿಧಿಯನ್ನು ಸ್ಥಾಪಿಸುವುದರ ಮೂಲಕವೂ ಮತ್ತು ಸಮಾನ ಉದ್ದೇಶಗಳುಳ್ಳ ಇತರ ಸಂಘಸಂಸ್ಥೆಗಳೊಂದಿಗೆ ರೂಪಿಸಿ ನಿರ್ವಹಿಸುವುದು.

# ಬ್ಯಾಂಕಿಂಗ್ ಪ್ರಪಂಚ

ಹಣ, ಬ್ಯಾಂಕಿಂಗ್ ವಿಚಾರಗಳಿಗೆ
ಮೀಸಲಾದ ಅರ್ಧವಾರ್ಷಿಕ

ಸಂಪುಟ ೧ ಸಂಚಿಕೆ ೧
ಜೂನ್ ೧೯೮೦

ಸಂಪಾದಕ
ಎಚ್ಚೆಸ್ಕೆ



**ವಾರ್ಷಿಕ ಚಂದಾ ೫ ರೂ.**

**ಬಿಡಿ ಪ್ರತಿ ೩ ರೂ.**

# ಬ್ಯಾಂಕಿಂಗ್ ಪ್ರಪಂಚ

## ಪರಿವಿಡಿ



**ಪತ್ರಿಕೆಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಆಯಾ ಲೇಖಕರವೇ. ಅವು ಸಂಪಾದಕರವು ಅಥವಾ ಸಮನ್ವಯ ಸಮಿತಿಯವು ಆಗಿರಬೇಕಾದ್ದಿಲ್ಲ.**

# ಬ್ಯಾಂಕಿಂಗ್ ಪ್ರಪಂಚ

## ಈ ಸಂಚಿಕೆಯ ಲೇಖಕರು

**ಎಸ್. ಎನ್. ಸಿಂಹನ್,** ಯೂನಿಯನ್ ಬ್ಯಾಂಕ್ ಆಫ್ ಇಂಡಿಯದ ಬೆಂಗಳೂರಿನ ನೌಕರರ ತರಬೇತಿ ಕೇಂದ್ರ.

**ಎಚ್. ಜಿ. ಸೋಮಶೇಖರರಾವ್,** ವ್ಯವಸ್ಥಾಪಕರು, ಕೆನರಾ ಬ್ಯಾಂಕ್, ತೊಣಚಿಕೊಪ್ಪಲು ಶಾಖೆ, ಮೈಸೂರು

**ಡಾ. ಅಬ್ದುಲ್ ಅಜೀಸ್,** ಬೆಂಗಳೂರಿನ ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆ ಅಧ್ಯಯನ ಸಂಸ್ಥೆಯಲ್ಲಿ ಫೆಲೋ ಇನ್ ಎಕನಾಮಿಕ್ಸ್

**ವೈ. ವಿಜಯಾನಂದ್,** ಸ್ಟೇಟ್ ಬ್ಯಾಂಕ್ ಆಫ್ ಇಂಡಿ, ಬೆಂಗಳೂರು ನಗರ ಶಾಖೆಯಲ್ಲಿ ಸಣ್ಣ ಕೈಗಾರಿಕೆ ಮತ್ತು ವ್ಯಾಪಾರ ವಿಭಾಗದ ವ್ಯವಸ್ಥಾಪಕರು.

**ರಾಬರ್ಟ್ ಮೆಕ್‌ನಮಾರ,** ವಿಶ್ವ ಬ್ಯಾಂಕ್ ಅಧ್ಯಕ್ಷರು

**ಪಾ. ರಾಜಗೋಪಾಲ,** ಸ್ಟೇಟ್ ಬ್ಯಾಂಕ್ ಆಫ್ ಇಂಡಿಯ, ಬೆಂಗಳೂರು ನಗರ ಶಾಖೆಯಲ್ಲಿ ಉದ್ಯೋಗಿ; ಕನ್ನಡ ಸಂಘಗಳ ಸಮನ್ವಯ ಸಮಿತಿಯ ಪ್ರಧಾನ ಕಾರ್ಯದರ್ಶಿಗಳಲ್ಲೊಬ್ಬರು

**ಕೆ. ಎಸ್. ಅಹಲ್ಯಾ,** ಕರ್ನಾಟಕ ಸರ್ಕಾರದ ಆರ್ಥಿಕ ಮತ್ತು ಸಾಂಖ್ಯಿಕ ಇಲಾಖೆಯ ಉಪನಿರ್ದೇಶಕಿ, ಬೆಂಗಳೂರು

**ಕೃಷ್ಣೇಗೌಡ,** ಮೈಸೂರಿನ ಮಾನಸಗಂಗೋತ್ರಿಯ ಅಂಚೆ ಮತ್ತು ತೆರಪಿನ ಶಿಕ್ಷಣ ಸಂಸ್ಥೆಯಲ್ಲಿ ಅರ್ಥಶಾಸ್ತ್ರ ಅಧ್ಯಾಪಕ

**ಮೇ. ಕೃ. ಅನಂತಸ್ವಾಮಿ,** ಸ್ಟೇಟ್ ಬ್ಯಾಂಕ್ ಆಫ್ ಇಂಡಿಯದ ನಗರ ಶಾಖೆಯಲ್ಲಿ ಅಂತರರಾಷ್ಟ್ರೀಯ ಬ್ಯಾಂಕಿಂಗ್ ವಿಭಾಗದ ವ್ಯವಸ್ಥಾಪಕ

**ಸಿ. ಎಸ್. ಶೇಷಾದ್ರಿ, ಐ.ಎ.ಎಸ್.(ನಿವೃತ್ತ),** ಕರ್ನಾಟಕ ರಾಜ್ಯ ಹಣಕಾಸು ನಿಗಮದ ಮಾಜಿ ವ್ಯವಸ್ಥಾಪಕ; ನಿರ್ದೇಶಕ, ಸಾಮಾಜಿಕ ಮತ್ತು ಆರ್ಥಿಕ ಅಧ್ಯಯನ ಸಂಸ್ಥೆಯ ಮಾಜಿ ನಿರ್ದೇಶಕ.

**ಸಿ. ಕೆ. ರೇಣುಕಾರ್ಯ,** ಮೈಸೂರಿನ ಮಾನಸಗಂಗೋತ್ರಿಯ ಸ್ನಾತಕೋತ್ತರ ಅರ್ಥಶಾಸ್ತ್ರ ವಿಭಾಗದಲ್ಲಿ ಅಧ್ಯಾಪಕ

**ಎಚ್. ಬಿ.ರಾಮು,** ಭಾರತೀಯ ಸ್ಟೇಟ್ ಬ್ಯಾಂಕಿನಲ್ಲಿ ಅಧಿಕಾರಿ; ಈಗ ಬೆಂಗಳೂರಿನಲ್ಲಿರುವ ಬ್ಯಾಂಕಿನ ಸಿಬ್ಬಂದಿ ತರಬೇತಿ ಕೇಂದ್ರದಲ್ಲಿ ಅಧ್ಯಾಪಕ

**ಎಂ. ಆರ್. ಪೈ,** ಅಖಿಲ ಭಾರತ ಬ್ಯಾಂಕ್ ಠೇವಣಿದಾರರ ಸಂಘದ ಉಪಾಧ್ಯಕ್ಷ.

**ಜಿ. ಎನ್. ನರಸಿಂಹಮೂರ್ತಿ,** ಭಾರತೀಯ ಸ್ಟೇಟ್ ಬ್ಯಾಂಕ್, ಬೆಂಗಳೂರು ಶಾಖೆಯಲ್ಲಿ ಉದ್ಯೋಗಿ

**ಡಾ. ಕೆ. ಪುಟ್ಟಸ್ವಾಮಯ್ಯ,** ನಿರ್ದೇಶಕರು, ಅನಾವೃಷ್ಟಿಪೀಡಿತ ಪ್ರದೇಶಗಳ ಸುಧಾರಣೆ; ಮತ್ತು ನಿರ್ದೇಶಕರು, ಪರಿಯೋಜನಾ ರಚನಾ ವಿಭಾಗ, ಯೋಜನಾ ಇಲಾಖೆ, ಕರ್ನಾಟಕ ಸರ್ಕಾರದ ಸಚಿವಾಲಯ

**'ಸ್ಯಾಂ'**

**ಸೂ. ಸುಬ್ರಹ್ಮಣ್ಯಂ,** ರಿಸರ್ವ್ ಬ್ಯಾಂಕ್ ಕನ್ನಡ ಸಂಘದ ಸಂಸ್ಥಾಪಕ ಅಧ್ಯಕ್ಷ

**ಸುರೇಶ್ ಬೈಲೂರ್,** ಭಾರತೀಯ ಸ್ಟೇಟ್ ಬ್ಯಾಂಕಿನ, ಬೆಂಗಳೂರು ನಗರ ಶಾಖೆಯಲ್ಲಿ ಅಧಿಕಾರಿ.

**ಕೆ. ಪಿ. ರಾವ್,** ನ್ಯಾಯವಾದಿಗಳು ಮತ್ತು 'ನ್ಯಾಯಸುಧಾ' ಕನ್ನಡ ಮಾಸಪತ್ರಿಕೆಯ ಸಂಪಾದಕ.

**ಎಚ್ಚೆಸ್ಕೆ,** ಎಚ್. ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್, ಈ ಪತ್ರಿಕೆಯ ಸಂಪಾದಕ; ಮೈಸೂರು ವಿಶ್ವವಿದ್ಯಾನಿಲಯದ ಮಾನಸಗಂಗೋತ್ರಿಯಲ್ಲಿ ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ವಿಶ್ವಕೋಶದ ಮಾನವಿಕ ಸಂಪಾದಕ

**ಮ. ನಾ. ಕುಲಕರ್ಣಿ,** ಭಾರತೀಯ ಸ್ಟೇಟ್ ಬ್ಯಾಂಕಿನ, ಬೆಂಗಳೂರು (ದಂಡು) ಶಾಖೆಯಲ್ಲಿ ಅಧಿಕಾರಿ.

# ಸಂಪಾದಕೀಯ

## ಸ್ವವಿಷಯ

ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ ಕನ್ನಡ ಸಂಘಗಳ ಸಮನ್ವಯ ಸಮಿತಿಯ ಆಶ್ರಯದಲ್ಲಿ ಬ್ಯಾಂಕಿಂಗ್ ಉದ್ಯಮಕ್ಕೆ ಸಂಬಂಧಿಸಿದಂತೆ ಹೊರಡಿಸಲಾಗುತ್ತಿರುವ ಈ ಪತ್ರಿಕೆಯ ಪ್ರಥಮ ಸಂಚಿಕೆಯನ್ನು ಬ್ಯಾಂಕಿಂಗಿನಲ್ಲಿ ಆಸಕ್ತಿ ಇರುವ ಕನ್ನಡ ಬಂಧುಗಳಿಗೆ ಒಪ್ಪಿಸಲು ನಮಗೆ ಬಹಳ ಹರ್ಷವಾಗುತ್ತದೆ. ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ ಭಾರತದ ಅತ್ಯಂತ ಪ್ರತಿಷ್ಠಿತ ವಾಣಿಜ್ಯ ಬ್ಯಾಂಕು. ದೇಶದ ಹಣಸ್ಥಿತಿಯ ಮೇಲೆ ಇದು ಬೀರಬಲ್ಲ ಪರಿಣಾಮ ಅಗಾಧ. ದೇಶದ ತ್ವರಿತ ಆರ್ಥಿಕಾಭ್ಯುದಯದ ಸಾಧನೆಯಲ್ಲಿ ಇದರ ಪಾತ್ರ ಅತ್ಯಂತ ಪ್ರಮುಖವಾದ್ದು. ಕೇಂದ್ರೀಯ ಬ್ಯಾಂಕಿಗೂ ವಾಣಿಜ್ಯ ಬ್ಯಾಂಕುಗಳಿಗೂ ನಡುವಣ ಮುಖ್ಯ ಕೊಂಡಿಯಾಗಿ, ಸಾಮಾಜಿಕ ಪರಿವರ್ತನೆಯ ವೇಗವರ್ಧಕವಾಗಿ ಈ ಬ್ಯಾಂಕು ಅನೇಕ ವಿಚಾರಗಳಲ್ಲಿ ಇತರ ಬ್ಯಾಂಕುಗಳಿಗೆ ಮೇಲ್ಪಂಕ್ತಿಯಾಗಿದೆ. ಕರ್ನಾಟಕ ರಾಜ್ಯದಲ್ಲಿರುವ ಈ ಬ್ಯಾಂಕಿನ ಕಾರ್ಯಾಲಯಗಳಲ್ಲಿ ಅಭಿಮಾನಿ-ಉತ್ಸಾಹಿಗಳ ಒಂದು ಸಮರ್ಥ ತಂಡವೇ ಇರುವುದು ಹೆಮ್ಮೆಯ ಸಂಗತಿ. ಬ್ಯಾಂಕು ಇರುವುದು ಎಲ್ಲರಿಗಾಗಿ. ಆದ್ದರಿಂದ ಹತ್ತು-ಸಮಸ್ತರ ಭಾಷೆಯಲ್ಲೇ ಇದರ ವ್ಯವಹಾರ ನಡೆಯಬೇಕೆಂಬುದು ಇವರ ಆಕಾಂಕ್ಷೆ. ಹಾಗೆ ಆದಾಗಲೇ ಬ್ಯಾಂಕು ನಿಜವಾದ ಅರ್ಥದಲ್ಲಿ ಮಾರ್ಗದರ್ಶಿಯಾಗುತ್ತದೆ, ಅಗ್ರಪೂಜೆಗೆ ಅರ್ಹವಾಗುತ್ತದೆ. ಮನ್ನಿಸಲಿ, ಯಾರು ಬಿಡಲಿ, ದೇಶವನ್ನು ಕಟ್ಟುವ ಕೆಲಸದಲ್ಲಿ ಸಾರ್ಥಕವಾದ ಪಾತ್ರ ವಹಿಸಿದ ಕೃತಕೃತ್ಯತೆಯ ಭಾವ ಉಂಟಾಗುತ್ತದೆ.

ಈ ಕನಸನ್ನು ನನಸು ಮಾಡುವ ಹಾದಿಯಲ್ಲಿ ಮೊದಲ ಹೆಜ್ಜೆಯಾಗಿ ಬ್ಯಾಂಕಿನ ಕನ್ನಡಿಗ ನೌಕರರು ಹಲವು ವರ್ಷಗಳ ಹಿಂದೆ ತಂತಮ್ಮ ಕಛೇರಿಗಳಲ್ಲಿ ಕನ್ನಡ ಸಂಘಗಳನ್ನು ಸ್ಥಾಪಿಸಿದರು. "ಸಿಬ್ಬಂದಿಯಲ್ಲಿ ಕನ್ನಡದ ಬಗ್ಗೆ ಜಾಗೃತಿಯನ್ನೂ ಬ್ಯಾಂಕಿನಲ್ಲಿ ಕನ್ನಡದ ವಾತಾವರಣವನ್ನೂ ಮೂಡಿಸುವ ಉದ್ದೇಶದಿಂದ, ಮತ್ತು ಸಂಸ್ಕೃತಿಯನ್ನು ಅರಿಯುವ ಪ್ರಯತ್ನವಾಗಿ " ಇವು ಸ್ಥಾಪಿತವಾದುವು. "ಈ ಎಲ್ಲ ಸಂಘಗಳ ಕಾರ್ಯವ್ಯಾಪ್ತಿಯನ್ನು ಹೆಚ್ಚಿಸಲು ಕೈಗೊಂಡ ಕಾರ್ಯಗಳನ್ನು ಇಡಿಯಾಗಿ ಸಾಧಿಸಲು," ಇವುಗಳ ಚಟುವಟಿಕೆಗಳಲ್ಲಿ ಸಾಮರಸ್ಯವನ್ನು ಸ್ಥಾಪಿಸಲು ಈ ಸಂಘಗಳೆಲ್ಲವನ್ನೂ ಪ್ರತಿನಿಧಿಸುವ ಸಮನ್ವಯ ಸಮಿತಿಯೊಂದು ರೂಪಿತವಾಯಿತು. "ಕನ್ನಡ ಸಾಹಿತ್ಯ, ಕಲೆ, ಜಾನಪದ ಮುಂತಾದ ವಿಷಯಗಳಿಗೆ ಸಂಬಂಧಿಸಿದಂತೆ ವಿಚಾರಗೋಷ್ಠಿ, ಉಪನ್ಯಾಸ ಇತ್ಯಾದಿಗಳನ್ನು ಏರ್ಪಡಿಸುವುದು, ಶಾಖಾ ಕನ್ನಡ ಸಂಘಗಳ ಕಾರ್ಯಕ್ರಮಗಳಿಗೆ ಸಲಹೆ ಸಹಕಾರ ನೀಡುವುದು, ಕನ್ನಡದಲ್ಲಿ ಆಸಕ್ತಿ ಇರುವವರಿಗೆ ಆ ಭಾಷೆ ಸಾಹಿತ್ಯಗಳಲ್ಲಿ ತರಬೇತಿ ದೊರಕಿಸಿ ಕೊಡುವುದು," ಒಟ್ಟಿನಲ್ಲಿ "ಕನ್ನಡ ಸಾಹಿತ್ಯ ಸಾಂಸ್ಕೃತಿಕ ಚಟುವಟಿಕೆಗಳನ್ನು ತೀವ್ರಗೊಳಿಸುವುದು" ಮಾತ್ರವೇ ಅಲ್ಲದೆ, "ಬ್ಯಾಂಕಿಂಗ್ ವಿಷಯದ ಬಗ್ಗೆ ಒಂದು ನಿಯತಕಾಲಿಕವನ್ನು ಪ್ರಕಾಶಿಸುವುದೂ, ಈ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಪಾರಿಭಾಷಿಕ ಶಬ್ದಕೋಶವನ್ನೂ ಗ್ರಂಥಗಳನ್ನೂ ಬರೆಯಿಸಿ ಪ್ರಕಟಿಸುವುದೂ" ಈ ಸಮಿತಿಯ ಉದ್ದೇಶ. ಬ್ಯಾಂಕಿನ ನಗರ ಶಾಖೆ ಪ್ರಕಟಿಸುತ್ತಿರುವ 'ಮಂದಾರ' ದಲ್ಲಿ ಸದಸ್ಯರ ಸೃಷ್ಟ್ಯಾತ್ಮಕ ಬದುಕಿಗೆ ಅಭಿವ್ಯಕ್ತಿ ದೊರಕಿದೆ. ಬ್ಯಾಂಕಿಗನ್ನು ಕುರಿತಂತೆ ಅದರಲ್ಲಿ ಪ್ರಕಟವಾಗಿರುವ ಹಲವು

ಲೇಖನಗಳು ತಕ್ಕಮಟ್ಟಿಗೆ ಮೇಲೆ ಹೇಳಿದ ಉದ್ದೇಶವನ್ನು ಪೂರೈಸುತ್ತವೆ. ಬ್ಯಾಂಕಿಂಗಿಗೇ ಮೀಸಲಾದ, ಇದರಲ್ಲಿ ಕಾರ್ಯನಿರತರಾದವರಿಗೂ ಆಸಕ್ತಿಯುಳ್ಳ ಸಾರ್ವಜನಿಕರಿಗೂ ಬ್ಯಾಂಕಿಂಗ್ ವಿದ್ಯಾರ್ಥಿಗಳಿಗೂ ಉಪಯುಕ್ತವಾಗುವ ಪತ್ರಿಕೆಯೊಂದನ್ನು ಹೊರಡಿಸಬೇಕೆಂಬ ಆಕಾಂಕ್ಷೆ ಇದೀಗ ಫಲಿಸುತ್ತಿದೆ. ಇದು ನಮಗೆ ಸಂತೋಷ ನೀಡುವ ಸಂಗತಿ.

ಹಣ ಮತ್ತು ಬ್ಯಾಂಕಿಂಗಿನ ಎಲ್ಲ ಮುಖಗಳ, ಎಲ್ಲ ಹಿತಗಳ ಪಡಿನೆಳಲು ಇದಾಗಬೇಕು ಎಂಬುದು ನಮ್ಮ ಆಸೆ. ಭಾರತದಲ್ಲೂ ಕರ್ನಾಟಕದಲ್ಲೂ ಈ ಉದ್ಯಮ ಸಾಗಿರುವ ಬಗೆ, ಬ್ಯಾಂಕು ರಾಷ್ಟ್ರೀಕರಣದ ಸಾಧಕ-ಬಾಧಕಗಳು, ವಿಶ್ವ ಹಣ ಸಮಸ್ಯೆ, ಬ್ಯಾಂಕಿಂಗ್ ಉದ್ಯಮ ದಲ್ಲಿರುವವರು ಎದುರಿಸಬೇಕಾಗಿರುವ ಸಮಸ್ಯೆಗಳು, ಗ್ರಾಹಕರ ಕುಂದುಕೊರತೆಗಳು, ಬ್ಯಾಂಕಿಂಗ್ ಕಾನೂನು ಮತ್ತು ಆಚರಣೆ, ಸಮಾಜ ಪರಿವರ್ತನೆ ಹಾಗೂ ಆರ್ಥಿಕ ಪುರೋಗಮನಕ್ಕಾಗಿ ಬ್ಯಾಂಕುಗಳು ಕೈಗೊಂಡಿರುವ ಕಾರ್ಯಕ್ರಮಗಳ ವಿಶ್ಲೇಷಣೆ ಮುಂತಾಗಿ ನಾನಾ ವಿಷಯಗಳನ್ನು ಕುರಿತ ಲೇಖನಗಳು ಇಲ್ಲಿವೆ. ಕನ್ನಡದಲ್ಲೇ ಬ್ಯಾಂಕಿಂಗ್ ವ್ಯವಹಾರವನ್ನು ನಡೆಸಲು ಅಗತ್ಯವಾದ ಶಬ್ದ ಸಂಪತ್ತನ್ನು ಒದಗಿಸಲು ಪತ್ರಿಕೆ ಪ್ರಯತ್ನಿಸಿದೆ. ಹಣ ಮತ್ತು ಬ್ಯಾಂಕಿಂಗನ್ನು ಕುರಿತ ಪ್ರಮುಖ ಪರಿಕಲ್ಪನೆಗಳನ್ನೆಲ್ಲ ಕನ್ನಡದಲ್ಲಿ ಅಭಿವ್ಯಕ್ತಿಸುವುದು ಸಾಧ್ಯವೆಂಬ ಧೈರ್ಯವನ್ನೂ ಈ ಲೇಖನಗಳು ಮೂಡಿಸುತ್ತವೆ. ಬ್ಯಾಂಕಿಂಗಿನ ಇತಿಹಾಸದ ಪರಿಚಯ ಮಾಡಿಕೊಡುವುದೂ ಪತ್ರಿಕೆಯ ಉದ್ದೇಶ. ಈ ನಿಟ್ಟಿನಲ್ಲಿ ಮೊದಲನೆಯ ಲೇಖನ ಈ ಸಂಚಿಕೆಯಲ್ಲಿ ಪ್ರಕಟವಾಗಿದೆ.

ಯಾವುದೇ ಪತ್ರಿಕೆಯಾಗಲಿ, ಅದೊಂದು ಸಮುದಾಯ ಚಟುವಟಿಕೆ. ಬ್ಯಾಂಕಿಂಗ್ ಕುರಿತ ಪತ್ರಿಕೆಯಂತೂ, ಎತ್ತರದ ವೇದಿಕೆಯ ಮೇಲೆ ನಿಂತು ಬಿತ್ತರಿಸಿದ ಏಕಮುಖ ವಾಣಿಯಾಗ ಲಾರದು. ಲೇಖಕರು, ಸಂಪಾದಕರು, ಓದುಗರು—ಇವರ ನಡುವೆ ಭಾವಸಂಹವನ ನಡೆಯು ವಂತಾಗಬೇಕು. ಬ್ಯಾಂಕಿಂಗಿನಲ್ಲೂ ಕನ್ನಡದಲ್ಲೂ ಆಸಕ್ತರಾದವರೆಲ್ಲರೂ ಇದನ್ನು ತಮ್ಮದೆಂದು ಪೋಷಿಸಬೇಕು. ತಮಗೆ ಅನಿಸಿದ್ದನ್ನು ತಿಳಿಸಬೇಕು. ಪತ್ರಿಕೆಯ ಉತ್ತಮಿಕೆಗೆ ನೆರವಾಗಬೇಕು. ಆಗ ಪತ್ರಿಕೆಯ ಉದ್ದೇಶ ಸಾರ್ಥಕವಾಗುತ್ತದೆ.

ಈ ಪತ್ರಿಕೆಯ ಕೆಲಸದಲ್ಲಿ ಸಹಕಾರ ಸಹಾಯ ನೀಡುತ್ತಿರುವವರು ಅನೇಕರು. ದಕ್ಷರೂ ಅನುಭವಿಗಳೂ ವಿದ್ವಾಂಸರೂ ಆದವರಿಂದ ಕೂಡಿದ ಸಲಹಾ ಮಂಡಲಿಯ ಮಾರ್ಗದರ್ಶನ ವನ್ನು ಇಲ್ಲಿ ಕೃತಜ್ಞತೆಯಿಂದ ನೆನೆಯಬೇಕು. ಸಮನ್ವಯ ಸಮಿತಿಯ ಪದಾಧಿಕಾರಿಗಳು ಹಾಗೂ ಸದಸ್ಯರು ಇದಕ್ಕಾಗಿ ಬಹಳವಾಗಿ ದುಡಿದಿದ್ದಾರೆ. ದಕ್ಷರಾದ ಮುದ್ರಕರು ದೊರಕಿರು ವುದು ನಮ್ಮ ಅದೃಷ್ಟ. ಅನೇಕ ಹಿರಿಯ ಸಂಸ್ಥೆಗಳೂ ಉದ್ಯಮಗಳೂ ಜಾಹೀರಾತನ್ನು ಕೊಟ್ಟು ಪ್ರೋತ್ಸಾಹಿಸಿವೆ. ಬ್ಯಾಂಕಿಂಗ್ ಆಸಕ್ತರೆಲ್ಲರೂ ಈ ಪತ್ರಿಕೆಯನ್ನು ಪ್ರೀತಿಯಿಂದ ಸ್ವೀಕರಿಸು ವರೆಂಬ ಭರವಸೆ ನಮಗೆ ಇದೆ. ಇವರೆಲ್ಲರ ಬೆಂಬಲ ಸದಾಶಯಗಳಲ್ಲಿ ಭರವಸೆ ಇಟ್ಟು ಈ ಪತ್ರಿಕೆಯ ರಥೋತ್ಸವ ಆರಂಭವಾಗಿದೆ. ಇದನ್ನು ನೆಲೆಯತ್ತ ಎಳೆಯುವುದು ನಿಮ್ಮೆಲ್ಲರ ಹೊಣೆ. ಏಕೆಂದರೆ ಇದು ನಿಮ್ಮದೇ.

**ಸಂಪಾದಕ**

# ಭಾರತೀಯ ಬ್ಯಾಂಕಿಂಗ್—ಈಚಿನ ಪ್ರವೃತ್ತಿಗಳು

ಎಸ್. ಎನ್. ಸಿಂಹನ್

**ಸ್ಟೇಟ್ ಬ್ಯಾಂಕ್ ಅಫ್ ಇಂಡಿಯಾ ಕನ್ನಡ ಸಂಘಗಳ ಸಮನ್ವಯ ಸಮಿತಿ ಏರ್ಪಡಿಸಿದ್ದ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ಗಳಿಸಿದ ಪ್ರಬಂಧ**

ಇತ್ತೀಚಿನ ವರ್ಷಗಳಲ್ಲಿ ಭಾರತೀಯ ಅರ್ಥವ್ಯವಸ್ಥೆಯ ಯಾವ ವಿಭಾಗವೂ ಸಾಧಿಸದಷ್ಟು ಪ್ರಗತಿಯನ್ನು ಬ್ಯಾಂಕಿಂಗ್ ಉದ್ಯಮ ಸಾಧಿಸಿದೆಯೆಂದರೆ ಅತಿಶಯೋಕ್ತಿಯಾಗದು. ಇದು ಹೆಮ್ಮೆಪಡಬೇಕಾದ ವಿಷಯವಾದರೂ ಭಾರತದಂಥ ಅಭಿವೃದ್ಧಿಶೀಲ ಅರ್ಥವ್ಯವಸ್ಥೆಯಲ್ಲಿ ಸಂತೃಪ್ತ ಮನೋಭಾವಕ್ಕೆ ಎಡೆ ಇಲ್ಲ. ಸಾಧಿಸಬೇಕಾಗಿರುವುದೂ ಬಹಳವಿದೆ. ಉದ್ಯಮ ಎದುರಿಸುತ್ತಿರುವ ಸಮಸ್ಯೆಗಳೂ ಅನೇಕ.

ಬಾಂಕಿಂಗ್ ಉದ್ಯಮದ ಇತ್ತೀಚಿನ ಪ್ರವೃತ್ತಿಗಳ ನಿಷ್ಪಕ್ಷಪಾತ ವಿಶ್ಲೇಷಣೆ ಮಾಡುವ ಮುನ್ನ, ರಾಷ್ಟ್ರೀಕರಣಕ್ಕೆ ಕಾರಣವಾದ ಬೆಳವಣಿಗೆಗಳು ಹಾಗೂ ಅನಂತರ ಉದ್ಯಮ ನಡೆದುಬಂದ ದಾರಿಯ ಸ್ಥೂಲ ಪರಿಶೀಲನೆ ಅಗತ್ಯ. ಆದ್ದರಿಂದ ಈ ಲೇಖನವನ್ನು ಈ ರೀತಿ ಮೂರು ವಿಭಾಗಗಳಾಗಿ ವಿಂಗಡಿಸಲಾಗಿದೆ: 1 ರಾಷ್ಟ್ರೀಕರಣಕ್ಕೆ ಕಾರಣವಾದ ಬೆಳವಣಿಗೆಗಳು, 2 ರಾಷ್ಟ್ರೀಕರಣದ ಅನಂತರ ಉದ್ಯಮ ನಡೆದು ಬಂದ ದಾರಿ, 3 ಈಚಿನ ಪ್ರವೃತ್ತಿಗಳು ಹಾಗೂ ಭವಿಷ್ಯದ ನಿರೀಕ್ಷೆಗಳು.

## ರಾಷ್ಟ್ರೀಕರಣಕ್ಕೆ ಕಾರಣವಾದ ಬೆಳವಣಿಗೆಗಳು

ಸ್ವಾತಂತ್ರ್ಯಾನಂತರ ಸುಖೀ ರಾಜ್ಯ ಸ್ಥಾಪನೆಯ ಉದ್ದೇಶದಿಂದ ಕೈಗೊಂಡ ಯೋಜನೆಗಳಿಂದ ಅಂದಿನ ಖಾಸಗಿ ಬ್ಯಾಂಕುಗಳಿಗೆ ಸಾಕಷ್ಟು ಲಾಭವಾಗಿದ್ದರೂ ಅವು ಕೇವಲ ಹಣವಂತರ ಹಾಗೂ ದೊಡ್ಡ ಉದ್ಯಮಿಗಳ ಕೈಗೊಂಬೆಗಳಾಗಿಯೇ ಉಳಿದು ಅರ್ಥವ್ಯವಸ್ಥೆಯ ಆವಶ್ಯಕತೆಗಳ ಕಡೆ ನಕಾರಾತ್ಮಕ ಮನೋಭಾವವನ್ನೇ ಹೊಂದಿದ್ದುವು. ಅವುಗಳ ಕಾರ್ಯನಿರ್ವಹಣೆ ಸಾರ್ವಜನಿಕರ ನಿರೀಕ್ಷೆಗೆ ವಿರುದ್ಧವಾಗಿತ್ತು. ಬಡತನದಲ್ಲಿ ತೇಲಿ ಮುಳುಗುತ್ತಿದ್ದ ಕೋಟಿಗಟ್ಟಲೆ ಭಾರತೀಯರಿಗೆ ಸಮಾನತೆಯ ಆಧಾರದ ಮೇಲೆ ಸಾಮಾಜಿಕ ನ್ಯಾಯ ದೊರಕಿಸಲು ಖಾಸಗಿ ಬ್ಯಾಂಕುಗಳು ಹಿಂಜರಿಯುತ್ತಿದ್ದುವು. ಇಂದಿಗೂ ನಮ್ಮ ದೇಶವನ್ನು ಕಿತ್ತು ತಿನ್ನುತ್ತಿರುವ ನಿರುದ್ಯೋಗ ಹಾಗೂ ಉತ್ಪಾದನೆಯ ಕೊರತೆಯನ್ನು ನೀಗಲು ನೆರವಾಗುವುದರಲ್ಲೂ ಅವು ಅಸಹಾಯಕ ಮನೋಭಾವವನ್ನೇ ಹೊಂದಿದ್ದುವು.

ಅಲ್ಲದೆ, ಬೃಹತ್ ನಗರ ಹಾಗೂ ರೇವುಪಟ್ಟಣಗಳಿಗಷ್ಟೇ ಬ್ಯಾಂಕುಗಳ ಕಾರ್ಯ ಸೀಮಿತವಾಗಿತ್ತು. ಸಣ್ಣ ಪಟ್ಟಣಗಳಲ್ಲಿ ಅಪವಾದವೆಂಬಂತೆ ಇರುತ್ತಿದ್ದ ಶಾಖೆಗಳನ್ನು ಕೂಡ ನಗರಗಳಲ್ಲಿನ ಉದ್ದಿಮೆದಾರರ ಉಪಯೋಗಕ್ಕಾಗಿಯೇ ಠೇವಣಿ ಸಂಗ್ರಹಿಸಲು ಬಳಸಿಕೊಳ್ಳಲಾಗುತ್ತಿತ್ತು. ಅವುಗಳ ಸಾಲ ನೀಡಿಕೆಗೆ ಆಸ್ತಿಯೇ ಮುಖ್ಯ ಆಧಾರವಾಗಿತ್ತು ಹಾಗೂ ಹೆಚ್ಚು ಆಸ್ತಿ ಇದ್ದಷ್ಟೂ ಸಾಲ ಸಿಗುವುದು ಸುಲಭವಾಗುತ್ತಿತ್ತು. ಬ್ಯಾಂಕಿಗೆ ಆಧಾರ ಮಾಡಲು ಆಸ್ತಿಯಿಲ್ಲದ ಸಾಮಾನ್ಯರು ಬ್ಯಾಂಕುಗಳಿಗೆ ಹೋಗಲೂ ಹೆದರುತ್ತಿದ್ದರು. ಇದರಿಂದ ಆರ್ಥಿಕ ಪ್ರಗತಿಯಲ್ಲಿ ತೀವ್ರವಾದ ಭೌಗೋಳಿಕ ಅಸಮಾನತೆಗಳುಂಟಾದುವು.

ಇವುಗಳಿಗೆ ಕಾರಣಗಳೂ ಇಲ್ಲದಿಲ್ಲ. ಖಾಸಗಿ ಒಡೆತನದಲ್ಲಿದ್ದ ಬ್ಯಾಂಕುಗಳ ಮುಖ್ಯ ಉದ್ದೇಶ ಲಾಭ ಗಳಿಕೆಯೇ ಆಗಿತ್ತು. ಅವುಗಳ ಸಾಮಾನ್ಯ ಷೇರುದಾರರು ಸಾಮಾಜಿಕ ಹೊಣೆ ಹೊತ್ತು ಲಾಭಾಂಶ ಕಡಿಮೆ ಮಾಡಿಕೊಳ್ಳಲು ಸಿದ್ಧರಿರಲಿಲ್ಲ. ಇದರಿಂದಾಗಿ ಕೆಲವೇ ಮಂದಿ ಪ್ರಭಾವಶಾಲಿ ಉದ್ದಿಮೆದಾರರು ಷೇರುದಾರರಿಗೆ ಹೆಚ್ಚು ಲಾಭಾಂಶದ ಆಮಿಷ ಒಡ್ಡಿ ಅರ್ಥವ್ಯವಸ್ಥೆಯನ್ನು ತಮ್ಮ ಹಿಡಿತದಲ್ಲಿರಿಸಿಕೊಳ್ಳಲು ಹಾಗೂ ಅಗತ್ಯ ವಸ್ತುಗಳನ್ನು ಅನಾವಶ್ಯಕವಾಗಿ ಶೇಖರಿಸಿ ಹೆಚ್ಚುಹೆಚ್ಚು ಲಾಭ ಗಳಿಸಲು ಸಾಧ್ಯವಾಗಿತ್ತು.

ಕೃಷಿ ಹಾಗೂ ಅದಕ್ಕೆ ಸಂಬಂಧಿಸಿದ ಚಟುವಟಿಕೆಗಳಿಗೆ ಸಾಲ ನೀಡುವುದು ತಮ್ಮ ಕಾರ್ಯವ್ಯಾಪ್ತಿಗೆ ಸೇರಿದ್ದೇ ಅಲ್ಲವೆಂಬ ಧೋರಣೆಯನ್ನು ಅವು ಹೊಂದಿದ್ದುವು. ಆದ್ದರಿಂದಲೇ ರಾಷ್ಟ್ರೀಯ ವರಮಾನದ ಬಹುಪಾಲು ವ್ಯವಸಾಯ ಕ್ಷೇತ್ರದಿಂದ ಬರುತ್ತಿದ್ದರೂ ಅದಕ್ಕೆ ಬ್ಯಾಂಕುಗಳಿಂದ ದೊರೆಯುತ್ತಿದ್ದ ಸಾಲದ ಪರಿಮಾಣ ಅತ್ಯಲ್ಪವಾಗಿತ್ತು. ಅಲ್ಲದೆ ಅರ್ಥವ್ಯವಸ್ಥೆಗೆ ಗಮನಾರ್ಹವಾದ ಕಾಣಿಕೆ ಸಲ್ಲಿಸುತ್ತಿದ್ದ ಸಣ್ಣ ಕೈಗಾರಿಕೆಗಳು, ಸಣ್ಣ ಉದ್ದಿಮೆದಾರರು, ಸಣ್ಣ ಗಾತ್ರದ ಉತ್ಪಾದಕರು, ರಸ್ತೆ ಸಾರಿಗೆ ಹಾಗೂ ಜಲಸಾರಿಗೆ ಕ್ಷೇತ್ರದವರು, ವೃತ್ತಿನಿರತರು, ಸ್ವಂತ ಉದ್ಯೋಗಿಗಳು ಹಾಗೂ ಚಿಲ್ಲರೆ ವರ್ತಕರನ್ನು ಖಾಸಗಿ ಬ್ಯಾಂಕುಗಳು ಸಂಪೂರ್ಣವಾಗಿ ನಿರ್ಲಕ್ಷಿಸಿದ್ದುವು. ಇದರ ಫಲವಾಗಿ ಇವರೆಲ್ಲ, ಅದರಲ್ಲೂ ಮುಖ್ಯವಾಗಿ ಬಡ ಹಳ್ಳಿಗರು, ಹೆಚ್ಚು ಬಡ್ಡಿ ತೆರಬೇಕಾದ ಖಾಸಗಿ ಸಾಲಗಳಿಗೆ ಬಲಿಯಾಗಿ ಇನ್ನೂ ಬಡವರಾಗುತ್ತ ನಡೆದಿದ್ದರು.

ಅಮೂಲ್ಯವಾದ ವಿದೇಶೀ ವಿನಿಮಯವನ್ನು ತರುತ್ತಿದ್ದ ರಫ್ತು ಉದ್ಯಮಕ್ಕೂ ಇದೇ ಗತಿಯಾಗಿತ್ತು.

ಈ ಅನಪೇಕ್ಷಣೀಯ ಪ್ರವೃತ್ತಿಯನ್ನು ಸರಕಾರ ಗುರುತಿಸಿದ್ದರೂ ಬ್ಯಾಂಕುಗಳು ಹೊಂದಿದ್ದ ಭಾರಿ ಮೊತ್ತದ ಠೇವಣಿಗಳ ಮೇಲೆ ಹತೋಟಿಯಿಲ್ಲದೆ ಅದು ಏನನ್ನೂ ಮಾಡಲು ಸಾಧ್ಯವಿರಲಿಲ್ಲ. ಆದರೂ ಮೊದಲ ಹೆಜ್ಜೆಯಾಗಿ ಅದು ವಿಧಿಸಿದ ಸಾಮಾಜಿಕ ನಿರ್ಬಂಧಗಳು ಬ್ಯಾಂಕುಗಳ ಕಾರ್ಯನಿರ್ವಹಣೆಯಲ್ಲಿ ಅಪೇಕ್ಷಣೀಯ ಬದಲಾವಣೆಗಳನ್ನು ಮೂಡಿಸಲು ವಿಫಲವಾದಾಗ ಯೋಜನೆಗಳನ್ನು ಕಾರ್ಯಗತಗೊಳಿಸಲು ಬೇಕಾಗಿದ್ದ ಭಾರಿ ಮೊತ್ತದ ಬಂಡವಾಳಕ್ಕಾಗಿ ಹಾಗೂ ಬ್ಯಾಂಕುಗಳನ್ನು ನಮ್ಮ ಸಾಮಾಜಿಕ ಹಾಗೂ ಅರ್ಥವ್ಯವಸ್ಥೆಯ ಒಂದು ಅವಿಭಾಜ್ಯ ಅಂಗವನ್ನಾಗಿ ಮಾಡಲು ಅವುಗಳ ರಾಷ್ಟ್ರೀಕರಣ ಅನಿವಾರ್ಯವಾಯಿತು. ಈ ಕಾರ್ಯ ಎಲ್ಲರಿಗೂ ತಿಳಿದಿರುವಂತೆ 1969ರ ಜುಲೈ 19ರಂದು ನೆರವೇರಿತು.

### ರಾಷ್ಟ್ರೀಕರಣದ ಅನಂತರ

ರಾಷ್ಟ್ರೀಕರಣದಿಂದಾಗಿ ಭಾರತೀಯ ಬ್ಯಾಂಕಿಂಗ್‌ನ ಇತಿಹಾಸದಲ್ಲಿ ಒಂದು ಹೊಸ ಅಧ್ಯಾಯವೇ ಪ್ರಾರಂಭವಾಯಿತು. ಇದರಿಂದ ಬ್ಯಾಂಕಿಂಗ್ ವ್ಯವಹಾರದ ಬಹುತೇಕ ಭಾಗ (ಸೇ. 85ರಷ್ಟು) ಸರಕಾರದ ಹತೋಟಿಗೆ ಬಂದುದರಿಂದ ರಾಷ್ಟ್ರೀಯ ಯೋಜನೆಗಳಿಗೆ ಅನುಸಾರವಾಗಿ ಬ್ಯಾಂಕುಗಳ ಕಾರ್ಯನೀತಿಗಳನ್ನು ಬದಲಾಯಿಸಲು ಅದಕ್ಕೆ ಸಾಧ್ಯವಾಯಿತು. ಇದರಿಂದಾಗಿ ಅವುಗಳ ವ್ಯಾಪಾರೀ ಧೋರಣೆಯಲ್ಲಿ ಸಾಗರದಷ್ಟು ಬದಲಾವಣೆಯಾಗಿ ತಾವು ಸಮಾಜದ ಸರ್ವತೋಮುಖ ಪ್ರಗತಿಯಲ್ಲಿ ಮುಖ್ಯ ಪಾತ್ರ ವಹಿಸುವ ಸಾಮಾಜಿಕ ಸಂಸ್ಥೆಗಳೆಂಬ ಅರಿವು ಅವುಗಳಿಗಾಯಿತು.

ಈಗ ಬಡ ಹಳ್ಳಿಗರೂ ತಮ್ಮ ಕುಂದು ಕೊರತೆಗಳ ಪರಿಹಾರ ಸಾಧ್ಯವೆಂಬ ಭರವಸೆ ಹಾಗೂ ವಿಶ್ವಾಸದಿಂದ ರಾಷ್ಟ್ರೀಕೃತ ಬ್ಯಾಂಕುಗಳನ್ನು ಪ್ರವೇಶಿಸುವುದು ಹೆಮ್ಮೆ ಪಡಬೇಕಾದ ಸಂಗತಿ.

ರಾಷ್ಟ್ರೀಕರಣದಿಂದ ಹೊಸತನದ ಉತ್ಸಾಹದಲ್ಲಿ ಬ್ಯಾಂಕುಗಳು ಹಲವಾರು ಮಹತ್ವಾಕಾಂಕ್ಷೆಯ ಕಾರ್ಯಕ್ರಮಗಳನ್ನು ರೂಪಿಸಿಕೊಂಡು ಅವುಗಳ ಅನುಷ್ಠಾನಕ್ಕೆ ಹಾಗೂ ತಾವೇ ವಿಧಿಸಿಕೊಂಡ ಗುರಿಗಳ ಸಾಧನೆಗೆ ಸಜ್ಜಾದುವು. ಮುಖ್ಯವಾಗಿ ಅವು ಸಾಧಿಸಬೇಕಾಗಿದ್ದ ಕೆಲಸವೆಂದರೆ ಹೆಚ್ಚು ಜನರಿಗೆ ಅದರಲ್ಲೂ ಖಾಸಗಿ ಬ್ಯಾಂಕುಗಳಿಂದ ನಿರ್ಲಕ್ಷಿಸಲ್ಪಟ್ಟಿದ್ದವರಿಗೆ ಬ್ಯಾಂಕಿಂಗ್ ಸೌಲಭ್ಯವನ್ನು ಒದಗಿಸುವುದು ಹಾಗೂ ಹಳ್ಳಿಯ ಜನರನ್ನು ಹೆಚ್ಚು ಬಡ್ಡಿ ದರದ ಖಾಸಗಿ ಸಾಲಗಳಿಂದ ಮುಕ್ತರನ್ನಾಗಿ ಮಾಡಿ ಅವರಲ್ಲಿ ಉಳಿತಾಯದ ಮನೋಭಾವವನ್ನು ಬೆಳೆಸುವುದು.

ಸರಿಯಾದ ಯೋಜಿತ ಕಾರ್ಯಕ್ರಮವಿಲ್ಲದೆ ಇದಕ್ಕೆ ಬೇಕಾಗಿದ್ದ ಭಾರೀ ಮೊತ್ತದ ಠೇವಣಿಗಳನ್ನು ಸಂಗ್ರಹಿಸುವುದು ಹಾಗೂ ಬ್ಯಾಂಕಿಂಗ್ ಸೌಲಭ್ಯಗಳನ್ನು ಹಳ್ಳಿಗಳಿಗೆ ವಿಸ್ತರಿಸುವುದು ಸಾಧ್ಯವಿರಲಿಲ್ಲ. ಇದಕ್ಕಾಗಿ ಅವುಗಳು ಯೋಜಿತ ರೀತಿಯಲ್ಲಿ ಕಾರ್ಯಪ್ರವೃತ್ತವಾದುವು.

ಅದರಿಂದಾಗಿ ಶಾಖೆಗಳೇ ಇಲ್ಲದ ಜಿಲ್ಲಾ ಕೇಂದ್ರಗಳಲ್ಲಿ ಶಾಖೆಗಳನ್ನು ತೆರೆಯಲು ಮೊದಲ ಆದ್ಯತೆ ದೊರೆಯಿತು. ಅನಂತರ ಕ್ರಮಕ್ರಮವಾಗಿ ಅವು ಸುತ್ತಲಿನ ಹಳ್ಳಿಗಳಲ್ಲಿ ಹಾಗೂ ಸಣ್ಣ ಪಟ್ಟಣಗಳಲ್ಲಿ ಶಾಖೆಗಳನ್ನು ತೆರೆಯಲು ಸಹಾಯಕವಾದುವು. ದೊಡ್ಡ ನಗರಗಳಲ್ಲೂ ದೂರದ ಬಡಾವಣೆಗಳಲ್ಲೂ ಶಾಖೆಗಳನ್ನು ತೆರೆಯಲು ಆದ್ಯತೆ ನೀಡಲಾಯಿತು.

ಶಾಖೆಗಳನ್ನು ತೆರೆಯಲು ಅನುಮತಿ ನೀಡುವ ತನ್ನ ಅಧಿಕಾರವನ್ನು ರಿಸರ್ವ್ ಬ್ಯಾಂಕು ವಿವೇಚನೆಯಿಂದ ಉಪಯೋಗಿಸಿ ಬೃಹತ್ ನಗರಗಳ ವ್ಯಾಪಾರ ಕೇಂದ್ರಗಳಲ್ಲೂ ಶಾಖೆಗಳನ್ನು ತೆರೆಯಲು ಅನುಮತಿ ನೀಡಿ ಗ್ರಾಮೀಣ ಶಾಖೆಗಳನ್ನು ತೆರೆಯುವುದರಿಂದ ಬ್ಯಾಂಕುಗಳಿಗೆ ನಷ್ಟವಾಗದಂತೆ ನೋಡಿಕೊಂಡಿತು. ಇದರ ಫಲಶ್ರುತಿಯಾಗಿ ಬ್ಯಾಂಕುಗಳಲ್ಲಿನ ಉದ್ಯೋಗಾವಕಾಶಗಳೂ ಬಹಳಷ್ಟು ಹೆಚ್ಚಾದುವು. 1969ರಲ್ಲಿ ಸುಮಾರು 2 ಲಕ್ಷದಷ್ಟಿದ್ದ ಬ್ಯಾಂಕ್ ನೌಕರರ ಸಂಖ್ಯೆ ಈಗ 5 ಲಕ್ಷಕ್ಕಿಂತ ಹೆಚ್ಚಾಗಿದೆ.

ಠೇವಣಿ ಸಂಗ್ರಹಣೆಯ ಕಾರ್ಯವನ್ನು ತೀವ್ರಗೊಳಿಸಲು ಆಕರ್ಷಕ ಪ್ರತಿಫಲ ಕೊಡುವ ಹಾಗೂ ಸಮಾಜದ ಎಲ್ಲ ವರಮಾನ ವರ್ಗಗಳವರೂ ಉಳಿತಾಯ ಮಾಡಲು ಸಾಧ್ಯವಾಗುವಂಥ ಅನೇಕ ಹೊಸ ಠೇವಣಿ ಯೋಜನೆಗಳನ್ನು ಜಾರಿಗೆ ತರಲಾಯಿತು.

ಆಸ್ತಿಯೇ ಆಧಾರವಾಗಿದ್ದ ಖಾಸಗಿ ಬ್ಯಾಂಕುಗಳ ಸಾಲ ನೀಡುವಿಕೆ ನೀತಿ ಸಂಪೂರ್ಣವಾಗಿ ಬದಲಾಗಿ ಸಾಲದ ಉದ್ದೇಶ ಹಾಗೂ ಅದರಿಂದ ಸಮಾಜಕ್ಕೆ ಆಗುವ ಅನುಕೂಲಗಳಿಗೆ ಮೊದಲ ಸ್ಥಾನ ಸಿಕ್ಕಿತು. ಸಾಲ ಬಯಸುವವರ ಆರ್ಥಿಕ ಸ್ಥಿತಿಗಿಂತ ಅವರು ಕೈಗೊಳ್ಳುವ ಕೆಲಸಕ್ಕೆ ಹೆಚ್ಚು ಪ್ರಾಮುಖ್ಯ ದೊರೆಯಿತು. ಸಾಲ ಕೊಟ್ಟ ಹಣದ ಸರಿಯಾದ ಉಪಯೋಗವಾಗುವಂತೆ ನೋಡಿಕೊಳ್ಳುವ ಕಾರ್ಯವನ್ನೂ ಬ್ಯಾಂಕುಗಳು ಕೈಗೊಂಡುವು.

ಅಲ್ಲದೆ ಸಾಲ ನೀಡುವಲ್ಲಿ ಅದುವರೆಗೂ ನಿರ್ಲಕ್ಷಿಸಲ್ಪಟ್ಟಿದ್ದ ವರ್ಗಗಳಿಗೆ ಹಾಗೂ ಹಿಂದುಳಿದ ಪ್ರದೇಶಗಳ ಸರ್ವತೋಮುಖ ಅಭಿವೃದ್ಧಿಗೆ ಅನುಕೂಲವಾಗುವಂತಹ ಯೋಜನೆಗಳಿಗೆ ಆದ್ಯತೆ ನೀಡಲಾಯಿತು. ಇದಕ್ಕಾಗಿ ಬ್ಯಾಂಕುಗಳು ಸಣ್ಣ ಕೈಗಾರಿಕೆ, ಸಣ್ಣ ಉದ್ದಿಮೆಗಳು, ರಫ್ತು ಉದ್ಯಮ ಹಾಗೂ ವ್ಯವಸಾಯ ಕ್ಷೇತ್ರಗಳನ್ನು ದೊಡ್ಡ ಪ್ರಮಾಣದಲ್ಲಿ ಪ್ರವೇಶಿಸಿದುವು.

ಈ ಕಾರ್ಯವನ್ನು ಹಿಂದುಳಿದ ಹಾಗೂ ಎಂಥ ಪ್ರಗತಿಯನ್ನೂ ಕಾಣದ ಲಕ್ಷಾಂತರ ಹಳ್ಳಿಗರಿರುವ ನಮ್ಮ ದೇಶದಲ್ಲಿ ತೃಪ್ತಿಕರವಾಗಿ ಜಾರಿಗೆ ತರುವ ಕೆಲಸ ಅಗಾಧವಾದುದರಿಂದ ರಿಸರ್ವ್ ಬ್ಯಾಂಕಿನ ನೇತೃತ್ವದಲ್ಲಿ ರಾಷ್ಟ್ರೀಕೃತ ಬ್ಯಾಂಕುಗಳು ಈ ದಿಸೆಯಲ್ಲಿ ಹಲವಾರು ನೂತನ ಕಾರ್ಯಕ್ರಮಗಳನ್ನು ಸಿದ್ಧಗೊಳಿಸಿದುವು. ಈ ಕಾರ್ಯಕ್ರಮಗಳ ಉದ್ದೇಶ ಉತ್ಪಾದನೆಯ ಹೆಚ್ಚಳವನ್ನು ಸಾಧಿಸುವುದು, ಹಳ್ಳಿಗಳಲ್ಲಿ ಹೆಚ್ಚು ಉದ್ಯೋಗಾವಕಾಶಗಳನ್ನು ಕಲ್ಪಿಸಿ, ಆಗಲೇ ಜನಭರಿತವಾಗಿರುವ ಪಟ್ಟಣ ಹಾಗೂ ನಗರಗಳಿಗೆ ಅಲ್ಲಿಂದ ಜನರು ವಲಸೆ ಬರುವುದನ್ನು ತಡೆಯುವುದು ಹಾಗೂ ಜನರ ಜೀವನ ಮಟ್ಟವನ್ನು ಸುಧಾರಿಸುವುದೇ ಆಗಿತ್ತು. ಈ ಕಾರ್ಯಕ್ರಮಗಳಲ್ಲಿ ಮುಖ್ಯವಾದವುಗಳೆಂದರೆ:

1 ಸಣ್ಣ ಕೈಗಾರಿಕೆಗಳು ಹಾಗೂ ಸಣ್ಣ ಉತ್ಪಾದಕ ಉದ್ಯೋಗಗಳಲ್ಲಿ ತೊಡಗಿರುವವರಿಗೆ ಆದ್ಯತೆಯ ಮೇಲೆ ಆರ್ಥಿಕ ನೆರವು,

2 ಅಗ್ರ ಬ್ಯಾಂಕ್ ಯೋಜನೆ,

3 ಗ್ರಾಮಗಳ ದತ್ತು ಯೋಜನೆ,

4 ಗ್ರಾಮೀಣ ಬ್ಯಾಂಕುಗಳ ಸ್ಥಾಪನೆ,

5 ಕಡಿಮೆ ವರಮಾನದವರಿಗೆ ಕಡಿಮೆ ಬಡ್ಡಿ ದರದಲ್ಲಿ ಸಾಲ ನೀಡಿಕೆ,

6 ಸರ್ಕಾರಿ ವಲಯದ ದೊಡ್ಡ ಉದ್ಯಮಗಳಿಗೆ ಅಗತ್ಯವಾದ ಆರ್ಥಿಕ ನೆರವು.

ಈ ಕಾರ್ಯಕ್ರಮಗಳ ಅಂಗವಾಗಿ ಬ್ಯಾಂಕುಗಳು ಸಣ್ಣ ಕೈಗಾರಿಕೆಗಳಿಗೆ ಹಾಗೂ ಸಣ್ಣ ಉದ್ದಿಮೆದಾರರಿಗೆ ಅನೇಕ ವಿಧವಾದ ಸಾಲದ ಯೋಜನೆಗಳನ್ನು ನಿರ್ಮಿಸಿದವಲ್ಲದೆ ಸಾಲ ನೀಡಿಕೆಯ ವಿಧಾನವನ್ನೂ ಸರಳಗೊಳಿಸಿದುವು. ಅಲ್ಲದೆ ಭಾರತೀಯ ಆಹಾರ ಕಾರ್ಪೊರೇಷನ್ ಮೊದಲಾದ ಸರಕಾರಿ ಸ್ವಾಮ್ಯದ ದೊಡ್ಡ ಉದ್ದಿಮೆಗಳ ಆರ್ಥಿಕ ಅಗತ್ಯಗಳನ್ನೂ ಬ್ಯಾಂಕುಗಳು ಪೂರೈಸುವುದು ಸಾಧ್ಯವಾಯಿತು.

ಅಗ್ರ (ಲೀಡ್) ಬ್ಯಾಂಕ್ ಯೋಜನೆ ವ್ಯವಸಾಯಕ್ಷೇತ್ರದಲ್ಲಿ ಬ್ಯಾಂಕುಗಳು ಸಕ್ರಿಯವಾಗಿ ಭಾಗವಹಿಸಲು ಭದ್ರ ತಳಹದಿಯನ್ನು ಹಾಕಿಕೊಟ್ಟಿತು. ಯೋಜನೆಯ ಅಂಗವಾಗಿ ಪ್ರತಿಯೊಂದು ಜಿಲ್ಲೆಯಲ್ಲೂ ಒಂದು ಬ್ಯಾಂಕನ್ನು ಅಗ್ರ ಬ್ಯಾಂಕ್ ಎಂದು ಹೆಸರಿಸಲಾಯಿತು. ಅದು ಆ ಜಿಲ್ಲೆಯ ಯೋಜನೆಗಳನ್ನು ಕಾರ್ಯಗತಗೊಳಿಸುವಲ್ಲಿ ಉಳಿದ ಬ್ಯಾಂಕುಗಳ ನೇತೃತ್ವ ವಹಿಸುತ್ತಿತ್ತು. ಜಿಲ್ಲೆಯಲ್ಲಿ ಆರ್ಥಿಕ ಸಮೀಕ್ಷೆಗಳನ್ನು ನಡೆಸಿ ಹಿಂದುಳಿದ ಹಾಗೂ ಅಭಿವೃದ್ಧಿಗೆ ಅವಕಾಶ ಇರುವ ಪ್ರದೇಶಗಳನ್ನು ಹಾಗೂ ಔದ್ಯೋಗಿಕ ಕ್ಷೇತ್ರಗಳನ್ನು ಗುರುತಿಸಿ ಅಲ್ಲಿ ತ್ವರಿತಗತಿಯಲ್ಲಿ ಸಾಲ ನೀಡಿಕೆಯ ಕಾರ್ಯಕ್ರಮಗಳನ್ನು ಪ್ರಾರಂಭಿಸುವುದು ಅದರ ಹೊಣೆಯಾಗಿತ್ತು. ಅಲ್ಲದೆ ಅದು ರೈತರ ಹಾಗೂ ಕೃಷಿ ಕಾರ್ಮಿಕರ ಸಹಕಾರ ಸಂಘಗಳನ್ನು ಸ್ಥಾಪಿಸಿ ಅವುಗಳಿಗೆಆರ್ಥಿಕ ನೆರವನ್ನು ಒದಗಿಸುವ ಜವಾಬ್ದಾರಿಯನ್ನೂ ಹೊತ್ತಿತ್ತು.

ಇದಲ್ಲದೆ ಬ್ಯಾಂಕಿಂಗ್ ಸೌಲಭ್ಯಗಳಿಂದ ದೂರವಿರುವ ಇಡೀ ಹಳ್ಳಿಗಳನ್ನು ಕೆಲವು ಶಾಖೆಗಳು ದತ್ತು ಗ್ರಾಮಗಳೆಂದು ಪರಿಗಣಿಸಿ ಅಲ್ಲಿ ಆರ್ಥಿಕ ನೆರವು ಅಗತ್ಯವಿರುವ ಎಲ್ಲರಿಗೂ ಸಹಾಯ ನೀಡುವ ಯೋಜನೆಯೂ ಕಾರ್ಯರೂಪಕ್ಕೆ ಬಂತು. ಇಷ್ಟಾದರೂ ಶಾಖೆಗಳ ವಿಸ್ತರಣೆ ಸಮರ್ಪಕ ಮಟ್ಟವನ್ನು ಮುಟ್ಟಿರಲಿಲ್ಲ. ಅತಿ ಸಣ್ಣ ಹಳ್ಳಿಗಳಲ್ಲಿ ರಾಷ್ಟ್ರೀಕೃತ ಬ್ಯಾಂಕುಗಳ ಶಾಖೆಗಳನ್ನು ಸ್ಥಾಪಿಸುವುದರಿಂದ ಅವುಗಳ ಲಾಭಗಳಿಕೆಗೆ ತೀವ್ರ ಹಾನಿಯುಂಟಾಗುತ್ತಿತ್ತು. ಇದನ್ನು ಸರಕಾರ ಗುರುತಿಸಿ, ರಾಷ್ಟ್ರೀಕೃತ ಬ್ಯಾಂಕುಗಳು ಕೇಂದ್ರ ಹಾಗೂ ರಾಜ್ಯ ಸರ್ಕಾರಗಳಿಂದ ಸಣ್ಣ ಮೊತ್ತದ ಬಂಡವಾಳವನ್ನು ಪಡೆದು ಹಿಂದುಳಿದ ಹಳ್ಳಿಗಳಲ್ಲಿ ಕಡಿಮೆ ವೆಚ್ಚದಲ್ಲಿ ಕಾರ್ಯ ನಿರ್ವಹಿಸುವಂಥ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳನ್ನು ಸ್ಥಾಪಿಸುವ ಯೋಜನೆಯನ್ನು ಜಾರಿಗೆ ತಂದಿತು. ಹಿಂದುಳಿದ ವರ್ಗಗಳಿಗೆ ಹಾಗೂ ಇತರರಿಗೆ ವ್ಯವಸಾಯವೂ ಸೇರಿದಂತೆ ವಿವಿಧ ಉದ್ದೇಶಗಳಿಗಾಗಿ ಈ ಬ್ಯಾಂಕುಗಳು ಆರ್ಥಿಕ ನೆರವನ್ನು ನೀಡುತ್ತಿವೆ.

ಅಲ್ಲದೆ ಸಣ್ಣ ಉತ್ಪಾದಕರು ಹಾಗೂ ಇತರ ನಿರ್ಲಕ್ಷಿತ ವರ್ಗಗಳಿಗೆ ಆದ್ಯತೆಯ ಮೇಲೆ ಸಾಲ ದೊರೆಯುತ್ತಿದ್ದರೂ ಬ್ಯಾಂಕುಗಳು ವಿಧಿಸುತ್ತಿದ್ದ ಬಡ್ಡಿ ದರಗಳು ಅಲ್ಪಾದಾಯ ಹೊಂದಿದ್ದವರ ಹಾಗೂ ಆರ್ಥಿಕವಾಗಿ ಹಿಂದುಳಿದವರ ಶಕ್ತಿಗೆ ಮೀರಿದುವೆಂಬುದನ್ನು ಗಮನಿಸಿದ ಸರಕಾರ ಈ ವರ್ಗಗಳ ಜನರಿಗೆ ಕೇವಲ ಸೇ. 4ರಷ್ಟು ಬಡ್ಡಿ ದರದಲ್ಲಿ ಸಾಲ ದೊರಕಿಸುವ ಯೋಜನೆಯನ್ನು ಜಾರಿಗೆ ತಂದಿತು.

ಈ ಯೋಜನೆಗಳಿಂದಾಗಿ ಬ್ಯಾಂಕುಗಳನ್ನೇ ಕಾಣದ ಹಳ್ಳಿಗಳಲ್ಲಿ ಈಗ ಅವು ಮನೆಮಾತಾಗಿವೆ. ಅಲ್ಲದೆ ಅವು

ಕೇವಲ ವ್ಯಾಪಾರಿ ಸಂಸ್ಥೆಗಳಾಗದೆ ಬಡವರ ಮಿತ್ರ ಸಂಸ್ಥೆಗಳಾಗಿವೆ.

ಹೀಗೆ ರಾಷ್ಟ್ರೀಕರಣದ ನವೋತ್ಸಾಹದಲ್ಲಿ ಕೊಡಲಾಗುತ್ತಿದ್ದ ಸಾಲಗಳು ಮರುಪಾವತಿಯಾಗದೆ ಉಳಿಯುವ ಸಂಭವದಿಂದಾಗಿ ಬ್ಯಾಂಕುಗಳಿಗೆ ಆಗಬಹುದಾಗಿದ್ದ ನಷ್ಟವನ್ನು ತಡೆಯಲು ಹಾಗೂ ಈ ಪ್ರವೃತ್ತಿಯಿಂದ ಅವುಗಳ ಕಾರ್ಯಗತಿ ಕುಂಠಿತವಾಗುವ ಸಂಭಾವ್ಯತೆಯನ್ನು ಕಡಿಮೆ ಮಾಡಲು ಜಪಾನ್ ದೇಶದಲ್ಲಿದ್ದ ಯೋಜನೆಯೊಂದರ ಮಾದರಿಯಲ್ಲಿ "ಸಾಲ ಖಾತರಿ ನಿಗಮ" (ಕ್ರೆಡಿಟ್ ಗ್ಯಾರಂಟೀ ಕಾರ್ಪೊರೇಷನ್) ಎಂಬ ಒಂದು ಸ್ವಾಯತ್ತ ಸಂಸ್ಥೆಯನ್ನು ಸ್ಥಾಪಿಸಲಾಯಿತು. ಇದಲ್ಲದೆ ಸಣ್ಣ ಕೈಗಾರಿಕೆಗಳಿಗೆ ನೀಡಲಾದ ಸಾಲಗಳ ವಿಷಯದಲ್ಲೂ ಇಂಥ ಒಂದು ಯೋಜನೆಯನ್ನು (ಕ್ರೆಡಿಟ್ ಗ್ಯಾರಂಟೀ ಆರ್ಗನೈಸೇಷನ್) ರಿಸರ್ವ್ ಬ್ಯಾಂಕ್ ಪ್ರಾರಂಭಿಸಿತು. ಯಾವುದೇ ಕ್ರಮದಿಂದಲೂ ವಸೂಲಿ ಮಾಡಲು ಸಾಧ್ಯವಾಗದ ಸಾಲಗಳ ಮೊತ್ತದ ಸೇ. 75ರಷ್ಟು ಭಾಗವನ್ನು ಈ ಸಂಸ್ಥೆಗಳು ಬ್ಯಾಂಕುಗಳಿಗೆ ತುಂಬಿ ಕೊಡುತ್ತವೆ.

ಅಗತ್ಯ ಬಿದ್ದಾಗ ರಿಸರ್ವ್ ಬ್ಯಾಂಕ್ ತನ್ನ ಸಾಲ ನೀಡಿಕೆಯ ನೀತಿಯಲ್ಲಿ ಮತ್ತು ಬಡ್ಡಿ ದರಗಳಲ್ಲಿ ಸೂಕ್ತ ಮಾರ್ಪಾಡುಗಳನ್ನು ಮಾಡುತ್ತ, ಅವುಗಳ ಸಹಾಯದಿಂದ ಉತ್ಪಾದನೆಯ ಹೆಚ್ಚಳವೂ ಅಕ್ರಮ ದಾಸ್ತಾನು ಹಾಗೂ ಅತಿ ಲಾಭ ಗಳಿಸುವ ಪ್ರವೃತ್ತಿಯನ್ನು ತಡೆಯುವುದೂ ಹಣ ದುಬ್ಬರವನ್ನು ಹಾಗೂ ಅಗತ್ಯ ವಸ್ತುಗಳ ಬೆಲೆಗಳನ್ನು ಹಿಡಿತದಲ್ಲಿರಿಸಿಕೊಳ್ಳುವುದೂ ಸಾಧ್ಯವೆಂಬುದನ್ನು ತೋರಿಸಿ ಕೊಟ್ಟಿದೆ.

ಅಲ್ಲದೆ ಈ ಎಲ್ಲ ನೀತಿಗಳನ್ನೂ ರಾಷ್ಟ್ರೀಕರಣವಾಗದಿರುವ ಖಾಸಗೀ ಬ್ಯಾಂಕುಗಳಿಗೂ ಅನ್ವಯಿಸಲಾಗುತ್ತಿದೆ. ಇದರಿಂದಾಗಿ ಖಾಸಗಿ ಬ್ಯಾಂಕುಗಳೂ ಈ ದಶಕದಲ್ಲಿ ಅಸಾಧಾರಣ ಪ್ರಗತಿ ಸಾಧಿಸಲು ಸಾಧ್ಯವಾಗಿದೆಯಲ್ಲದೆ ಈಗ ಅವು ಸರಕಾರಿ ಬ್ಯಾಂಕುಗಳೊಡನೆ ಆರೋಗ್ಯಕರ ಪೈಪೋಟಿಯಲ್ಲಿ ತೊಡಗಿವೆ.

**ಈಚಿನ ಪ್ರವೃತ್ತಿಗಳು, ಭವಿಷ್ಯದ ನಿರೀಕ್ಷೆಗಳು**

ಬ್ಯಾಂಕಿಂಗ್ ಉದ್ಯಮದ ಈಚಿನ ಪ್ರವೃತ್ತಿಗಳು ಆಶಾದಾಯಕ ಹಾಗೂ ನಿರಾಶಾದಾಯಕ ಬೆಳವಣಿಗೆಗಳ ಮಿಶ್ರಣವಾಗಿವೆ. ಒಂದು ಕಡೆ ಬ್ಯಾಂಕುಗಳು ಹೊಸ ಯೋಜನೆಗಳನ್ನು ಸಿದ್ಧಪಡಿಸುತ್ತ ಹೊಸ ಹೊಸ ಕ್ಷೇತ್ರಗಳನ್ನು ಪ್ರವೇಶಿಸುತ್ತಿದ್ದರೆ, ಮತ್ತೊಂದೆಡೆ ವ್ಯವಸಾಯ ಹಾಗೂ ಅಸ್ವಸ್ಥ ಕೈಗಾರಿಕೆಗಳಿಗೆ ನೀಡಿದ ಬಹುಪಾಲು ಸಾಲ ಮರುಪಾವತಿಯಾಗದೆ ಉಳಿದಿರುವುದು ಅವುಗಳ ಲಾಭಗಳಿಕೆಯನ್ನು ದುಸ್ತರವಾಗಿಸಿವೆ. ಇದರಿಂದಾಗಿ ಹಲವು ಬ್ಯಾಂಕುಗಳು ನಷ್ಟಕ್ಕೊಳಗಾಗುವ ಸ್ಪಷ್ಟ ಸಾಧ್ಯತೆಗಳು ಕಂಡುಬಂದಿವೆ. ಅಲ್ಲದೆ ಈ ಕಾರಣದಿಂದ ಅವುಗಳ ಸಾಲ ನೀಡಿಕೆಯ ಸಾಮರ್ಥ್ಯವೂ ಕಡಿಮೆಯಾಗುತ್ತಿದೆ.

ಆದರೂ ಬ್ಯಾಂಕುಗಳು ತಾವು ಪ್ರವೇಶಿಸಿದ ಹೊಸ ಕ್ಷೇತ್ರಗಳಲ್ಲಿ ಆದ ಅನುಭವಗಳ ಬೆಳಕಿನಲ್ಲಿ ತಮ್ಮ ಕಾರ್ಯವಿಧಾನಗಳನ್ನು ತಿದ್ದಿಕೊಂಡು, ಹಲವಾರು ಹೊಸ ಯೋಜನೆಗಳನ್ನು ರೂಪಿಸುತ್ತ ಹಾಗೂ ಆಚರಣೆಯಲ್ಲಿದ್ದ ಯೋಜನೆಗಳನ್ನು ಹೆಚ್ಚು ಪರಿಣಾಮಕಾರಿಯಾಗಿ ಮಾಡುತ್ತ ನಡೆದಿರುವುದು ಉದ್ಯಮದ ಪ್ರಶಂಸಾರ್ಹ ಬೆಳವಣಿಗೆಗಳಲ್ಲಿ ಮುಖ್ಯವಾದುದು.

ಹೀಗಾಗಿ, ಕೆಲವು ಆಯ್ದ ಪ್ರದೇಶಗಳಲ್ಲಿ ಮಾತ್ರ ಜಾರಿಯಲ್ಲಿದ್ದ, ಕಡಿಮೆ ಆದಾಯವಿದ್ದವರಿಗೆ ಕಡಿಮೆ ಬಡ್ಡಿದರದಲ್ಲಿ ಸಾಲ ಕೊಡುವ, ಯೋಜನೆಯನ್ನು ಇಡೀ ದೇಶಕ್ಕೆ ವಿಸ್ತರಿಸಲಾಯಿತು; ಹಾಗೂ ಈ ಸಾಲಗಳ ವಿಷಯದಲ್ಲಿ "ಸಾಲ ಖಾತರಿ ನಿಗಮ" ತುಂಬಿ ಕೊಡುತ್ತಿದ್ದ ಸಾಲದ ಭಾಗವನ್ನು ಸೇ. 75ರಿಂದ ಸೇ. 90ಕ್ಕೆ ಹೆಚ್ಚಿಸಲಾಗಿದೆ. ಅಲ್ಲದೆ ಅನೇಕ ಹೊಸ ಉದ್ದೇಶಗಳು ಹಾಗೂ ಚಟುವಟಿಕೆಗಳನ್ನು ಈ ಯೋಜನೆಯ ವ್ಯಾಪ್ತಿಗೆ ಒಳಪಡಿಸಲಾಗಿದೆ. ಇದರಿಂದಾಗಿ ಜೀತಪದ್ಧತಿಯಿಂದ ವಿಮುಕ್ತರಾದವರು, ಭೂಸುಧಾರಣೆಯ ಜಾರಿಯಿಂದಾಗಿ ಜಮೀನು ಪಡೆದವರು ಮುಂತಾದವರು ಸಣ್ಣ ಉದ್ಯೋಗಗಳನ್ನು ಪ್ರಾರಂಭಿಸಲು ಅಥವಾ ವ್ಯವಸಾಯವನ್ನು ಕೈಗೊಳ್ಳಲು ಬ್ಯಾಂಕುಗಳಿಂದ ಆರ್ಥಿಕ ನೆರವನ್ನು ಪಡೆಯುತ್ತಿದ್ದಾರೆ.

ಸಣ್ಣ ಕೈಗಾರಿಕೆಗಳಿಗೆ ನೆರವು ನೀಡಲು ಬ್ಯಾಂಕುಗಳು ಆದ್ಯತೆ ನೀಡುತ್ತಿದ್ದರೂ ಈ ಸಾಲಗಳನ್ನು ಹೆಚ್ಚಾಗಿ ನಗರವಾಸಿಗಳು ಹಾಗೂ ದೊಡ್ಡ ಕೈಗಾರಿಕೋದ್ಯಮಿಗಳೇ ಪರೋಕ್ಷವಾಗಿ ಪಡೆಯುತ್ತಿದ್ದುದನ್ನು ಗಮನಿಸಿದ ರಿಸರ್ವ್ ಬ್ಯಾಂಕು ಇದನ್ನು ತಡೆಯಲು ಹಾಗೂ ಹಳ್ಳಿಗಳಲ್ಲಿ ಇನ್ನೂ ನಿರ್ಲಕ್ಷಿಸಲ್ಪಟ್ಟಿದ್ದ ಗ್ರಾಮೀಣ ಕೈಗಾರಿಕೆ, ಗುಡಿಗಾರಿಕೆ, ಕುಶಲಕರ್ಮ ಮುಂತಾದುವಕ್ಕೆ ನೆರವು ನೀಡಲು ಹೊಸ ಯೋಜನೆಗಳನ್ನು ಸಿದ್ಧಪಡಿಸಿತು. ಇದರಿಂದಾಗಿ ಜಿಲ್ಲಾ ಮಟ್ಟದ ಶಾಖೆಗಳು ಹೊಸದಾಗಿ ಸ್ಥಾಪಿಸಲಾಗಿದ್ದ ಜಿಲ್ಲಾ ಕೈಗಾರಿಕಾ ಕೇಂದ್ರದೊಡನೆ ಸಮಾಲೋಚಿಸಿ ಸಣ್ಣ ಮೊತ್ತದ ಸಾಲಗಳನ್ನು 30 ದಿನಗಳ ಅವಧಿಯೊಳಗಾಗಿ ನೀಡುವ ಯೋಜನೆ ಪ್ರಾರಂಭವಾಗಿದೆ.

ವ್ಯವಸಾಯ ಕ್ಷೇತ್ರವಂತೂ, ಬ್ಯಾಂಕುಗಳ ಪ್ರವೇಶದಿಂದಾಗಿ ಅಭಿವೃದ್ಧಿಶೀಲ ರಾಷ್ಟ್ರಗಳ ಇತಿಹಾಸದಲ್ಲೇ ಅದ್ವಿತೀಯ ವೆನಿಸುವಂಥ ಪ್ರಗತಿ ಸಾಧಿಸಿದೆ. ಅಲ್ಲದೆ ಇದು ಇತರ ಅಭಿವೃದ್ಧಿಶೀಲ ದೇಶಗಳಿಗೆ ಮಾದರಿಯಾಗುತ್ತಿದೆ.

ಈಗ ಬ್ಯಾಂಕುಗಳು ವ್ಯವಸಾಯಕ್ಷೇತ್ರದಲ್ಲಿ ಕೇವಲ ಅಲ್ಪಾವಧಿಯ ಬೆಳೆ ಸಾಲಗಳಲ್ಲದೆ ಪಂಪ್‌ಸೆಟ್, ಟ್ರಾಕ್ಟರ್

ಹಾಗೂ ಇತರ ಯಂತ್ರೋಪಕರಣಗಳ ಕೊಳ್ಳುವಿಕೆ, ಗೊಬ್ಬರ, ಬೀಜಗಳು ಹಾಗೂ ಕೀಟನಾಶಕಗಳ ವಿತರಣೆ, ಸಣ್ಣ ನೀರಾವರಿ ಯೋಜನೆಗಳು, ವಾಣಿಜ್ಯ ಬೆಳೆಗಳ ಅಭಿವೃದ್ಧಿ, ಹೈನುಗಾರಿಕೆ, ಕೋಳಿ ಹಾಗೂ ಹಂದಿ ಸಾಕಣೆ, ತೋಟಗಾರಿಕೆ, ಶೈತ್ಯಾಗಾರಗಳ ಸ್ಥಾಪನೆ, ಮೀನುಗಾರಿಕೆ, ವ್ಯವಸಾಯೋತ್ಪನ್ನಗಳ ಸಂಗ್ರಹಣೆ ಹಾಗೂ ಮಾರಾಟ ಯೋಜನೆಗಳು, ಗೃಹ ಕೈಗಾರಿಕೆ, ಭಾವಿಗಳ ನಿರ್ಮಾಣ, ಭೂಮಿ ಸಮಮಾಡುವಿಕೆ ಹಾಗೂ ಬೇಲಿ ಹಾಕುವುದು ಮುಂತಾದ ಅಭಿವೃದ್ಧಿ ಕಾರ್ಯಗಳಿಗೂ ದೊಡ್ಡ ಪರಿಮಾಣದಲ್ಲಿ ಆರ್ಥಿಕ ನೆರವನ್ನು ನೀಡುತ್ತಿವೆ. ಯಾವುದೇ ರೀತಿಯ ಉತ್ಪಾದಕ ಚಟುವಟಿಕೆಗೂ ಬ್ಯಾಂಕಿನ ನೆರವು ಈಗ ಸುಲಭವಾಗಿ ದೊರೆಯುತ್ತದೆ.

ಇದಕ್ಕಾಗಿ ಬ್ಯಾಂಕುಗಳು ವಿಶೇಷ ಪರಿಣತಿ ಪಡೆದಿರುವ ವ್ಯವಸಾಯ ಪದವೀಧರರನ್ನು ಅಧಿಕಾರಿಗಳಾಗಿ ನೇಮಿಸಿ ಕೊಂಡಿವೆ.

ಹಲವು ಬ್ಯಾಂಕುಗಳು ಇನ್ನೂ ಮುಂದೆ ಹೋಗಿ, ಮಾದರಿ ಬೆಳೆಗಳನ್ನು ಬೆಳೆಸಿ, ರೈತರಿಗೆ ಹೊಸ ತಳಿಗಳು, ಹೊಸ ಯಂತ್ರೋಪಕರಣಗಳು, ಹೆಚ್ಚು ಬೆಳೆ ಸಾಧಿಸುವ ನೂತನ ವಿಧಾನಗಳು ಇವುಗಳ ಬಗ್ಗೆ ತರಬೇತಿ ಕೊಡುತ್ತಿವೆ.

ಅಲ್ಲದೆ ಹಿಂದುಳಿದ ವರ್ಗಗಳ ಸಾಲಗಾರರು ಸಾಲದ ಹಣವನ್ನು ಅದರ ಉದ್ದೇಶಕ್ಕಾಗಿ ಉಪಯೋಗಿಸದೆ ಪೋಲು ಮಾಡುವುದನ್ನು ತಡೆಯಲು ಅಂತಹ ಕುಟುಂಬಗಳಲ್ಲಿ ನಡೆಯುವ ಮದುವೆ ಮುಂತಾದ ಸಮಾರಂಭಗಳಿಗೆ, ಸಂಭವಿಸಬಹುದಾದ ಸಾವು ನೋವುಗಳ ಸಂದರ್ಭದಲ್ಲಿ ಖರ್ಚಿಗೆ ಹಾಗೂ ಮಕ್ಕಳ ವಿದ್ಯಾಭ್ಯಾಸಕ್ಕೆ ಬೇಕಾದ ಪೂರಕ ನೆರವನ್ನೂ ಬ್ಯಾಂಕುಗಳು ಒದಗಿಸುತ್ತಿವೆ. ತಾವು ಹೊಂದಿ ರುವ ಸಾರ್ವಜನಿಕ ಹಣದ ಸದುಪಯೋಗದ ವಿಷಯದಲ್ಲಿ ಬ್ಯಾಂಕುಗಳಿಗೆ ಇರುವ ಕಳಕಳಿಯನ್ನು ಇದು ತೋರಿಸುತ್ತದೆ.

ಹೀಗೆ ಬ್ಯಾಂಕಿಂಗ್ ನಮ್ಮ ಸಾರ್ವಜನಿಕ ಜೀವನದ ಒಂದು ಭಾಗವಾಗಿ ಪರಿಣಮಿಸಿದೆ. ಬ್ಯಾಂಕುಗಳ ಅನೇಕ ಉಳಿತಾಯ ಯೋಜನೆಗಳು ಹಾಗೂ ಸಾಲ ಸೌಲಭ್ಯಗಳು ಈಗಾಗಲೇ ಜನಪ್ರಿಯವಾಗಿವೆ. ಈಗ ಬಡವ ಬಲ್ಲಿದರೆನ್ನದೆ ಎಲ್ಲರೂ ಬ್ಯಾಂಕುಗಳ ಠೇವಣಿದಾರರಾಗ ಬಹುದಾಗಿದೆ. ಕೂಲಿಯಾಳುಗಳು ಬ್ಯಾಂಕುಗಳಲ್ಲಿ ಇಡ ಬಯಸುವ ಸಣ್ಣ ಮೊತ್ತದ ಠೇವಣಿಗೂ ಈಗ ಸ್ವಾಗತವಿದೆ.

"ಬಾಳ ಸಂಜೆಯಲ್ಲಿ ನೆಮ್ಮದಿ ಬೇಕೆ?", "ನಮಗೆ ಯಾವ ಮೊತ್ತದ ಠೇವಣಿಯೂ ಚಿಕ್ಕದಲ್ಲ", "ಎಲ್ಲ ಋತುಗಳಲ್ಲೂ ನಿಮ್ಮ ಸಂಗಾತಿ", "ನಮ್ಮ ಗೃಹಲಕ್ಷ್ಮಿ ಯೋಜನೆಯಲ್ಲಿ ಹಣ ತೊಡಗಿಸಿ", "ನಿಮ್ಮ ಮಕ್ಕಳಿಗಾಗಿ ಭವ್ಯ ಭವಿಷ್ಯವನ್ನು ನಮ್ಮಲ್ಲಿ ಕಾದಿರಿಸಿ" ಮುಂತಾದ ಪ್ರಚಾರ ಫಲಕಗಳು ಈಗ ಸರ್ವೇಸಾಮಾನ್ಯ.

ಎಲ್ಲ ವರ್ಗದವರಿಗೂ ಅಗತ್ಯದ ಆಧಾರದ ಮೇಲೆ ಆರ್ಥಿಕ ನೆರವು ನೀಡಲೂ ಅವು ಸದಾ ಸಿದ್ಧ. ಈಗ ನೇಕಾರರು, ಕಮ್ಮಾರರು, ಹೂವು-ಹಣ್ಣು-ತರಕಾರಿ ಮಾರು ವವರು, ಕುಂಬಾರರು ಮುಂತಾದವರು ಕಡಿಮೆ ಬಡ್ಡಿಯಲ್ಲಿ ಸಾಲ ಪಡೆದು ತಾವು ಗಳಿಸುವ ಲಾಭವನ್ನು ಬ್ಯಾಂಕುಗಳ ಉಳಿತಾಯ ಖಾತೆಗಳಲ್ಲಿ ಕೂಡಿಡುವುದೂ ಸರ್ವವೇದ್ಯ. ಅವು ಈಗ ಬುಟ್ಟಿ ಹೆಣೆಯುವುದು ಹಾಗೂ ಹೋಟೆಲು ಗಳನ್ನು ನಡೆಸುವುದರಿಂದ ಹಿಡಿದು ಉಕ್ಕಿನ ಕಾರ್ಖಾನೆ, ವಿದ್ಯಾಭ್ಯಾಸ ಹಾಗೂ ವೈಜ್ಞಾನಿಕ ಸಂಶೋಧನೆಗಳ ವರೆಗೆ ವಿವಿಧ ರೀತಿಯ ಚಟುವಟಿಕೆಗಳಿಗೆ ನೆರವು ನೀಡುತ್ತಿವೆ. ಆಸ್ಪತ್ರೆಗಳ ನಿರ್ಮಾಣಕ್ಕಾಗಲಿ, ಶಾಲೆಯನ್ನು ಪ್ರಾರಂಭಿಸ ಲಾಗಲಿ, ಆಹಾರ ಸಂರಕ್ಷಣೆಗಾಗಿ ಉಗ್ರಾಣ ಕಟ್ಟುವುದಕ್ಕಾಗಲಿ ನೆರವು ನೀಡಲು ಅವು ಸದಾ ಸಿದ್ಧ. ಪ್ರವಾಹ, ಬಿರುಗಾಳಿ ಬರಗಾಲ ಮುಂತಾದ ನೈಸರ್ಗಿಕ ಪ್ರಕೋಪಗಳಿಗೆ ತುತ್ತಾ ದವರ ನೆರವಿಗೆ ಅವು ಸದಾ ಮುಂದು.

ಬ್ಯಾಂಕುಗಳ ಸಾಲದ ಯೋಜನೆಗಳ ಮಾಲೆಗೆ ಇತ್ತೀಚಿನ ಸೇರ್ಪಡೆಯೆಂದರೆ, ಇದುವರೆಗೂ ಇಲ್ಲವಾಗಿದ್ದ, ಸಾರ್ವ ಜನಿಕರಿಗೆ ಗೃಹನಿರ್ಮಾಣಕ್ಕಾಗಿ ಸಾಲ ನೀಡುವ ಯೋಜನೆ ಮುಂದಿನ ವರ್ಷಗಳಲ್ಲಿ ಸಾವಿರಾರು ಜನರಿಗೆ ಇದರ ಪ್ರಯೋಜನ ದೊರೆಯಲಿದೆ.

ಇವುಗಳನ್ನೆಲ್ಲ ವ್ಯವಸ್ಥಿತ ರೀತಿಯಲ್ಲಿ ನಡೆಸಲು ಎಲ್ಲ ಬ್ಯಾಂಕುಗಳೂ ತಮ್ಮ ವ್ಯವಹಾರಗಳ ಬೆಳೆವಣಿಗೆ ಹಾಗೂ ವಿಸ್ತರಣೆಗಾಗಿ ತಮ್ಮವೇ ಆದ ಯೋಜನೆಗಳನ್ನು ಸಿದ್ಧ ಪಡಿಸಿ ಅವುಗಳ ಅನುಷ್ಠಾನಕ್ಕೆ ಪ್ರಯತ್ನಿಸುತ್ತಿರುವುದು ಉದ್ಯಮದ ಇತ್ತೀಚಿನ ವೈಶಿಷ್ಟ್ಯಗಳಲ್ಲಿ ಒಂದಾಗಿದೆ.

ಅವುಗಳ ಕಾರ್ಯಕ್ಷೇತ್ರ ಕೇವಲ ಠೇವಣಿಗಳನ್ನು ಸಂಗ್ರ ಹಿಸುವುದು ಹಾಗೂ ಸಾಲ ಕೊಡುವುದಕ್ಕಷ್ಟೇ ಸೀಮಿತ ವಾಗಿಲ್ಲ. ಅವು ಅನೇಕ ಪೂರಕ ಸೇವೆಗಳನ್ನೂ ಸಲ್ಲಿಸುತ್ತಿವೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ:

1 ತೆರಿಗೆ, ಬಂಡವಾಳ ಮುಂತಾದ ವಿಷಯಗಳಲ್ಲಿ ಸಲಹೆ. ನೀಡುವುದು,
2 ವಿವಿಧ ರೀತಿಯ (ರೈಲ್ವೆ, ಕೇಂದ್ರ ಹಾಗೂ ರಾಜ್ಯ ರಕ್ಷಣಾ ಇಲಾಖೆಗಳು ನೀಡುವ) ಪಿಂಚಣಿಗಳನ್ನು ತನ್ನ ಖಾತೆದಾರರ ಪರವಾಗಿ ಸಂಗ್ರಹಿಸುವುದು,
3 ಹಲವಾರು ಸರ್ಕಾರಿ ಇಲಾಖೆಗಳ ಕೆಲಸಗಳನ್ನು ನಿರ್ವಹಿಸುವುದು,
4 ದೊಡ್ಡ ನಗರಗಳಲ್ಲಿ ನೀರು, ವಿದ್ಯುತ್ ಮುಂತಾದ ನಾಗರಿಕ ಸೌಲಭ್ಯಗಳ ಶುಲ್ಕಗಳನ್ನು ಸಾರ್ವಜನಿಕ ರಿಂದ ಪಡೆಯುವುದು,

5 ಪ್ರವಾಸಿಗಳ ಅನುಕೂಲಕ್ಕಾಗಿ " ಪ್ರಯಾಣಿಕರ ಚೆಕ್" ಗಳ ನೀಡಿಕೆ,

6 ಖಾತೆದಾರರ ಸ್ಥಾಯೀ ಆದೇಶಗಳನ್ನು ಪಾಲಿಸುವುದು,

7 ಹೊಸ ಕಂಪನಿಗಳ ಷೇರು ಮಾರಾಟಕ್ಕೆ ಸಹಾಯ ಮಾಡುವುದು,

8 ಸಾರ್ವಜನಿಕರಿಗೆ ತಮ್ಮ ಅಮೂಲ್ಯ ವಸ್ತುಗಳನ್ನು ಭದ್ರವಾಗಿರಿಸಲು ಕಪಾಟಗಳನ್ನು ನೀಡುವುದು (ಸೇಫ್ ಡಿಪಾಸಿಟ್ ಲಾಕರ್ಸ್).

ಇದರೊಂದಿಗೇ ಉದ್ಯಮ ಎದುರಿಸುತ್ತಿರುವ ಸಮಸ್ಯೆಗಳೂ ಅನೇಕ.

ಬಹುತೇಕ ಕಡೆಗಳಲ್ಲಿ ಇನ್ನೂ ನಿಸರ್ಗದ ಆಶೀರ್ವಾದವನ್ನೇ ನೆಚ್ಚಿರುವ, ಸಾಲ ಪಡೆದವರಲ್ಲಿ ಅನಕ್ಷರತೆ ಹಾಗೂ ಮೂಢನಂಬಿಕೆಗಳೇ ಹೆಚ್ಚಾಗಿರುವ ಮತ್ತು ಸರಕಾರ ರೈತರ ಪರವಾಗಿ ಆಗಾಗ ಮಧ್ಯಪ್ರವೇಶ ಮಾಡುವ ವ್ಯವಸಾಯ ಕ್ಷೇತ್ರಕ್ಕೆ ಕೊಟ್ಟಿರುವ ಸಾಲದ ವಸೂಲಿ ಬ್ಯಾಂಕುಗಳಿಗೆ ಅಸಾಧಾರಣ ಸಮಸ್ಯೆಗಳನ್ನು ತಂದೊಡ್ಡಿದೆ. ಈ ಕ್ಷೇತ್ರದಲ್ಲಿ ಬ್ಯಾಂಕ್ ನೌಕರರ ಹಾಗೂ ಅಧಿಕಾರಿಗಳ ಅನುಭವದ ಕೊರತೆಯೂ ಇದಕ್ಕೆ ಒಂದು ಮುಖ್ಯ ಕಾರಣ.

ಅಸ್ವಸ್ಥ ಕೈಗಾರಿಕೆಗಳಿಗೆ ಈಗಾಗಲೇ ಸಾವಿರ ಕೋಟಿ ರೂಪಾಯಿಗಳನ್ನೂ ಮೀರಿ ಕೊಟ್ಟಿರುವ ಹಣದ ಮರುಪಾವತಿಯೂ ಒಂದು ವಿಶೇಷ ಹಾಗೂ ಕ್ಲಿಷ್ಟ ಸಮಸ್ಯೆಯಾಗಿದೆ. ಇದಕ್ಕೆ ಹಲವಾರು ಕಾರಣಗಳಿವೆ. ಇವುಗಳಲ್ಲಿ ಮುಖ್ಯವಾದವೆಂದರೆ ಅಧಿಕಾರಿಗಳ ಅನುಭವದ ಕೊರತೆಯಿಂದ ಉಂಟಾದ, ಸಾಲದ ಆವಶ್ಯಕತೆಗಳ ದೋಷಪೂರಿತ ಪರಿಶೀಲನೆ ಹಾಗೂ ಸಾಲದ ಮೊತ್ತದ ದೋಷಪೂರಿತ ನಿರ್ಧಾರ. ಆವಶ್ಯಕತೆಗಿಂತ ಹೆಚ್ಚು ಅಥವಾ ಕಡಿಮೆ ಮೊತ್ತದ ಸಾಲ ಕೊಡುವುದು ಬ್ಯಾಂಕು ಹಾಗೂ ಸಾಲಗಾರರಿಬ್ಬರಿಗೂ ಹಾನಿಕರವೆಂಬುದನ್ನು ಬ್ಯಾಂಕುಗಳು ಈಗ ಮನಗಂಡಿವೆ. ಇವಲ್ಲದೆ ಸಾಲಗಾರರಿಂದ ಉದ್ದೇಶಪೂರಿತ ವಂಚನೆ, ಬೇಡಿಕೆಯಲ್ಲಿನ ವೈಪರೀತ್ಯಗಳು ಹಾಗೂ ಸರಕಾರದ ಬದಲಾದ ಧೋರಣೆಗಳು—ಇವೂ ಕೆಲವೊಮ್ಮೆ ಇದಕ್ಕೆ ಕಾರಣಗಳಾಗುವುದುಂಟು.

ತನ್ನ ನೌಕರರ ಅನುಭವದ ಕೊರತೆ ಬ್ಯಾಂಕುಗಳಿಗೆ ಒಂದು ಸಮಸ್ಯೆಯಾಗಿದೆ. ಅಧಿಕ ಸಂಖ್ಯೆಯಲ್ಲಿ ಶಾಖೆಗಳನ್ನು ತೆರೆದುದರಿಂದ ನೌಕರರಿಗೆ ಶೀಘ್ರವಾಗಿ ಬಡ್ತಿಗಳು ದೊರೆತುದು ಇದಕ್ಕೆ ಬಹುಮಟ್ಟಿಗೆ ಕಾರಣ. ಈಚೆಗೆ ಬ್ಯಾಂಕುಗಳಿಗೆ ಸೇರುತ್ತಿರುವವರ ಹೆಚ್ಚಿನ ವಿದ್ಯಾರ್ಹತೆಗಳು ಹಾಗೂ ದೊಡ್ಡ ಗಾತ್ರದಲ್ಲಿ ಬ್ಯಾಂಕುಗಳು ನಡೆಸುತ್ತಿರುವ ನೌಕರ ತರಬೇತಿ ಕಾರ್ಯಕ್ರಮಗಳು ಈ ಸಮಸ್ಯೆಯನ್ನು ಸ್ವಲ್ಪಮಟ್ಟಿಗೆ ಬಗೆಹರಿಸಿವೆ.

ಬ್ಯಾಂಕ್ ಸಾಲ ನೀಡಿಕೆಯಿಂದ ಉತ್ಪಾದನೆಗೆ ಬೇಕಾದ ವಸ್ತುಗಳನ್ನು ಹಾಗೂ ತಂತ್ರಜ್ಞಾನವನ್ನು ಒಂದುಗೂಡಿಸುವುದು ಸಾಧ್ಯವಾದರೂ ಕೇವಲ ಬ್ಯಾಂಕ್ ಸಾಲದಿಂದಲೇ ಸಮಾಜದ ಎಲ್ಲ ನ್ಯೂನತೆಗಳನ್ನೂ ದೂರ ಮಾಡಲು ಸಾಧ್ಯವೆಂಬ ತಪ್ಪು ಕಲ್ಪನೆ ಹಲವಾರು ಕಾರಣಗಳಿಂದಾಗಿ ಸಾರ್ವಜನಿಕರಲ್ಲಿ—ಸ್ವಲ್ಪ ಮಟ್ಟಿಗೆ ಆಡಳಿತಗಾರರಲ್ಲೂ—ಮೂಡಿರುವುದು ಉದ್ಯಮದ ದುರದೃಷ್ಟ. ಈ ಕಾರ್ಯ ಸಾಲದ ಸರಿಯಾದ ಉಪಯೋಗದಿಂದ ಮಾತ್ರವೇ ಸಾಧ್ಯವೆಂಬುದನ್ನು ಅವರಿಗೆ ತಿಳಿಯಪಡಿಸುವುದು ಅಗತ್ಯವಾಗಿದೆ.

ಅಲ್ಲದೆ ಬ್ಯಾಂಕುಗಳು ಹೊರಬೇಕಾದ ಸಾಮಾಜಿಕ ಹೊಣೆಯ ವಿಷಯವೂ ಅತಿಯಾದ ಪ್ರಾಮುಖ್ಯ ಪಡೆಯುತ್ತಿರುವುದು ವಿಷಾದದ ಸಂಗತಿ.

ಈ ಪ್ರವೃತ್ತಿಗಳನ್ನು ಸರಿಪಡಿಸಲು ಬ್ಯಾಂಕುಗಳ ಕಾರ್ಯ ಪರಿಧಿಯ ಇತಿಮಿತಿಗಳ ಬಗ್ಗೆ ಸಾರ್ವಜನಿಕರಲ್ಲಿ ಸರಿಯಾದ ತಿಳಿವಳಿಕೆ ಮೂಡಿಸುವುದು ಅಗತ್ಯ.

ಈಗಿನ ಬ್ಯಾಂಕುಗಳ ವ್ಯವಹಾರದ ಅಗಾಧತೆಯಿಂದಾಗಿ ಅವು ಗ್ರಾಹಕರಿಗೆ ನೀಡುತ್ತಿರುವ ಸೇವೆಯ ಮಟ್ಟ ಗಮನಾರ್ಹವಾಗಿ ಇಳಿದು ಸ್ವಲ್ಪಮಟ್ಟಿನ ಅದಕ್ಷತೆಯೂ ತಲೆದೋರಿರುವುದು ಗ್ರಾಹಕರಲ್ಲಿ ಅಸಮಾಧಾನವನ್ನು ಮೂಡಿಸಿದೆ. ಅಲ್ಲದೆ ಈಗ ಬ್ಯಾಂಕುಗಳು ಸಾರ್ವಜನಿಕರ ಸೂಕ್ಷ್ಮ ಪರಿಶೀಲನೆಗೆ ಒಳಗಾಗಿರುವುದರಿಂದ ಹಾಗೂ ಬಹುತೇಕ ಬ್ಯಾಂಕುಗಳು ಸರಕಾರಿ ರಂಗದಲ್ಲಿರುವುದರಿಂದ ಅವರ ನಿರೀಕ್ಷೆಗಳು ಹೆಚ್ಚುತ್ತಿವೆ.

ಇವುಗಳ ದುರ್ಲಾಭ ಪಡೆದು ಕೆಲವು ದುಷ್ಕರ್ಮಿಗಳು ಬ್ಯಾಂಕುಗಳನ್ನು ವಿವಿಧ ರೀತಿಗಳಲ್ಲಿ ವಂಚಿಸುತ್ತಿರುವುದು ಬ್ಯಾಂಕುಗಳು ಎದುರಿಸುತ್ತಿರುವ ಗಂಭೀರ ಸಮಸ್ಯೆಗಳಲ್ಲಿ ಒಂದು. ಇದನ್ನು ಎದುರಿಸಲು ಎಲ್ಲ ಬ್ಯಾಂಕುಗಳಿಗೂ ಅನ್ವಯಿಸುವಂಥ ಏಕರೂಪವಾದ ಆಂತರಿಕ ವಿಧಿ ವಿಧಾನಗಳನ್ನು ಜಾರಿಗೆ ತರುವ ತುರ್ತು ಆವಶ್ಯಕತೆ ಬ್ಯಾಂಕುಗಳಿಗೆ ಇದೆ.

ಇಷ್ಟಾದರೂ ಈಚಿನ ವರ್ಷಗಳಲ್ಲಿ ಉದ್ಯಮ ಸಾಧಿಸಿರುವ ಪ್ರಗತಿ ಯಾವ ದೃಷ್ಟಿಯಿಂದಲೂ ಕಡಿಮೆ ಎನ್ನಲಾಗದು. ಅಲ್ಲದೆ ಪ್ರಗತಿಯನ್ನು ಕೇವಲ ಅಂಕಿ-ಅಂಶಗಳ ಹೆಚ್ಚಳಕ್ಕಷ್ಟೇ ಸೀಮಿತಗೊಳಿಸದೆ ಬ್ಯಾಂಕಿನ ಸೇವೆಗಳ ಗುಣಮಟ್ಟದಲ್ಲಿಯೂ ಇದನ್ನು ಸಾಧಿಸಿರುವುದು ಪ್ರಶಂಸಾರ್ಹ.

ಇನ್ನೂ ಹೆಚ್ಚು ಪ್ರಗತಿಯನ್ನು ಸಾಧಿಸುವ ದೃಢ ನಿರ್ಧಾರದೊಂದಿಗೆ ಸರಕಾರದಿಂದ ಸೂಕ್ತ ಉತ್ತೇಜನ ಹಾಗೂ ಮಾರ್ಗದರ್ಶನ ದೊರೆತಲ್ಲಿ ಬರುವ ವರ್ಷಗಳಲ್ಲಿ ಬ್ಯಾಂಕುಗಳು ಪ್ರಗತಿಯ ಹೊಸ ದಾಖಲೆಗಳನ್ನು ಸ್ಥಾಪಿಸುವುದರಲ್ಲಿ ಸಂಶಯವಿಲ್ಲ.

## ಬ್ಯಾಂಕಿಂಗ್ ಉದ್ಯಮದ ಪ್ರಗತಿಯ ನೋಟ

| ಕ್ರಮ ಸಂಖ್ಯೆ | ವಿಷಯ | ರಾಷ್ಟ್ರೀಕರಣದ ಸಮಯದಲ್ಲಿ (ಜೂನ್ 1969) | ಹತ್ತು ವರ್ಷಗಳ ಅನಂತರ |
|---|---|---|---|
| | | | (ಕೋಟಿ ರೂ. ಗಳಲ್ಲಿ) |
| 1 | ಠೇವಣಿಗಳು : | | (ಜೂನ್ 1979) |
| | ಸರಕಾರೀ ಬ್ಯಾಂಕುಗಳು | 3,871 | 23,668 |
| | ಖಾಸಗಿ ಹಾಗೂ ವಿದೇಶಿ ಬ್ಯಾಂಕುಗಳು | 775 | 4,201 |
| | ಒಟ್ಟು | 4,646 | 27,869 |
| 2 | ಸಾಲಗಳು : | | |
| | ಸರಕಾರಿ ಬ್ಯಾಂಕುಗಳು | 3,017 | 15,897 |
| | | | (ಜೂನ್ 79) |
| | ಖಾಸಗಿ ಹಾಗೂ ವಿದೇಶೀ ಬ್ಯಾಂಕುಗಳು | 582 | 2,641 |
| | ಒಟ್ಟು | 3,599 | 18,538 |
| 3 | ನಿರ್ಲಕ್ಷಿತ ವರ್ಗಗಳಿಗೆ ಸಾಲ : | | (ಜೂನ್ 78) |
| | (i) ಕೃಷಿ | 162 | 1,658 |
| | (ii) ಸಣ್ಣ ಕೈಗಾರಿಕೆಗಳು | 251 | 1,641 |
| | (iii) ರಸ್ತೆ ಮತ್ತು ಜಲಸಂಚಾರ ಕ್ಷೇತ್ರ | 6 | 306 |
| | (iv) ಚಿಲ್ಲರೆ ವರ್ತಕರು ಮತ್ತು ಸಣ್ಣ ಉದ್ದಿಮೆದಾರರು | 19 | 295 |
| | (v) ವೃತ್ತಿನಿರತರು ಮತ್ತು ಸ್ವಂತ ಉದ್ಯೋಗಿಗಳು | 2 | 86 |
| | (vi) ವಿದ್ಯಾಭ್ಯಾಸ | 1 | 6 |
| | ಒಟ್ಟು | 440 | 3,992 |
| | | | (ಜೂನ್ 78) |
| 4 | ನಿರ್ಲಕ್ಷಿತ ವರ್ಗಗಳಿಗೆ ನೀಡಿದ ಸಾಲದ ಖಾತೆಗಳ ಸಂಖ್ಯೆ | 2,60,142 | 76,51,727 |
| | | | (ಜುಲೈ 1979) |
| 5 | ಆಹಾರ ಸಂಗ್ರಹಣೆಗಾಗಿ ನೀಡಿದ ಸಾಲ | 104 | 2,987 |
| 6 | ಕಡಿಮೆ ಬಡ್ಡಿಯ ಸಾಲ (ಡಿಸೆಂಬರ್ 1972ರಲ್ಲಿ ಹಾಗೂ ಮಾರ್ಚ್ 78ರಲ್ಲಿ) | 1 | 71 |
| 7 | ಶಾಖೆಗಳು : | | (ಏಪ್ರಿಲ್ 1979) |
| | ಗ್ರಾಮೀಣ | 1,832 | 13,064 |
| | ಸಣ್ಣ ಹಾಗೂ ದೊಡ್ಡ ಪಟ್ಟಣಗಳು | 4,769 | 12,516 |
| | ಬೃಹತ್ ನಗರಗಳು | 1,661 | 4,294 |
| | ಒಟ್ಟು ಶಾಖೆಗಳು | 8,262 | 29,874 |
| | | | (ಜೂನ್ 1979) |
| 8 | ಪ್ರತಿ ಶಾಖೆಗೆ ಸರಾಸರಿ ಜನಸಂಖ್ಯೆ | 65,000 | 21,000 |

ಆಧಾರ: ಕಾಲಕಾಲಕ್ಕೆ ಪ್ರಕಟವಾಗುತ್ತಿರುವ, ಬ್ಯಾಂಕಿಂಗ್ ಉದ್ಯಮಕ್ಕೆ ಸಂಬಂಧಿಸಿದ ಹಲವಾರು ನಿಯತಕಾಲಿಕಗಳು

# ಬ್ಯಾಂಕುಗಳ ರಾಷ್ಟ್ರೀಕರಣ—ಒಂದು ದಶಕದ ಸಾಧನೆ, ಸೋಲು

ಎಚ್. ಜಿ. ಸೋಮಶೇಖರರಾವ್

## ರಾಷ್ಟ್ರೀಕರಣದ ಚತುರ್ಮುಖ ಉದ್ದೇಶ ಎಷ್ಟರಮಟ್ಟಿಗೆ ಸಫಲವಾಗಿದೆ?

ಸರ್ಕಾರದ ಒಡೆತನದಲ್ಲಿ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ ಮತ್ತು ಅದರ ಸಹಾಯಕ ಬ್ಯಾಂಕುಗಳ ವ್ಯವಹಾರ ನಡೆಯುತ್ತಿದ್ದಾಗಲೆ, ಐವತ್ತು ಕೋಟಿ ಮತ್ತು ಅದಕ್ಕೂ ಮೀರಿದ ಠೇವಣಿಯಿದ್ದ ಹದಿನಾಲ್ಕು ಬ್ಯಾಂಕುಗಳನ್ನು ಜುಲೈ 1969ರಲ್ಲಿ ರಾಷ್ಟ್ರೀಕರಿಸಲಾಯಿತು. ನಮ್ಮ ದೇಶದ ಬ್ಯಾಂಕಿಂಗ್ ಪದ್ಧತಿಯ ಇತಿಹಾಸದಲ್ಲೇ ಇದು ಒಂದು ದೊಡ್ಡ ಮೈಲಿಗಲ್ಲು. ಇತ್ತೀಚೆಗೆ ಇನ್ನೂ ಆರು ಬ್ಯಾಂಕುಗಳನ್ನು ರಾಷ್ಟ್ರೀಕರಿಸಲಾಗಿದೆ. ಇದರಿಂದ ದೇಶದಲ್ಲಿದ್ದ ಬ್ಯಾಂಕುಗಳ ಬಹು ಭಾಗ ಸರಕಾರದ ಒಡೆತನಕ್ಕೆ ಬಂದಂತಾಗಿದೆ. ಈ ಎಲ್ಲ ಬ್ಯಾಂಕುಗಳ ಆಡಳಿತದ ವಿಷಯದಲ್ಲಿ ಸರಕಾರದ ಅಧಿಕಾರ ಹೆಚ್ಚಾಗಿದೆ.

1969ರಲ್ಲಿ ರಾಷ್ಟ್ರೀಕರಿಸಿದ ಹದಿನಾಲ್ಕು ಬ್ಯಾಂಕುಗಳ ಒಂದು ದಶಕದ ಸಾಧನೆ ಅಥವಾ ಸೋಲುಗಳನ್ನು ವಿಮರ್ಶಿಸುವುದು ಅಪೇಕ್ಷಣೀಯ. ಉಳಿದೆಲ್ಲ ಬ್ಯಾಂಕುಗಳನ್ನು ಗಮನದಲ್ಲಿರಿಸಿಕೊಂಡು ನೋಡಿದಾಗ ಸರಕಾರದ ಸ್ವಾಧೀನಕ್ಕೆ ಒಳಪಟ್ಟ ಬ್ಯಾಂಕುಗಳ ಒಟ್ಟು ಶಾಖೆಗಳು/ಕಛೇರಿಗಳು ಒಟ್ಟು ಸಂಖ್ಯೆಯ ಸೇಕಡ 80ನ್ನೂ ಮೀರಿವೆ. ಹಾಗೆಯೇ ಠೇವಣಿಗಳು 83.8% ನ್ನು ಮತ್ತು ಇಡಿಯ ಸಾಲದ ಮೊತ್ತ 83%ನ್ನು ದಾಟಿಹೋದವು. ಇದು 1969ರ ಚಿತ್ರ.

ರಾಷ್ಟ್ರೀಕರಣದ ಮೂಲಕ ಬ್ಯಾಂಕುಗಳ ಉದ್ದೇಶಗಳಲ್ಲಿ ದೊಡ್ಡ ಬದಲಾವಣೆಯನ್ನು ತರುವ ಪ್ರಯತ್ನ ನಡೆಯಿತು; ಅದರ ಫಲ-ಪ್ರಯೋಜನಗಳನ್ನು ದೇಶದ ಮೂಲೆ ಮೂಲೆಗೂ ತಲಪಿಸುವ ಕೆಲಸವಾಯಿತು. ಆದ್ಯತೆಯ ಕ್ಷೇತ್ರದಲ್ಲಿ —ವ್ಯವಸಾಯ ಕ್ಷೇತ್ರ, ಹಳ್ಳಿಗಾಡಿನ ಕಸಬುದಾರ, ಚಿಕ್ಕ ರೈತ ಮತ್ತು ಇದುವರೆಗೂ ಸಮಾಜದಿಂದ ನಿರ್ಲಕ್ಷಿಸಲ್ಪಟ್ಟಿರುವ ಜನಸಮುದಾಯ—ಬ್ಯಾಂಕುಗಳು ಮಾಡಬಹುದಾದ ಕಾರ್ಯ ಮಹತ್ವದ್ದಾಗಿದೆ. ಇದನ್ನು ಸಾಧಿಸಲು ರಾಷ್ಟ್ರೀಕರಣವಾದ ಮೇಲೆ ಬ್ಯಾಂಕುಗಳ ಶಾಖೆಗಳ ಸಂಖ್ಯೆ ಬೇಗ ಬೆಳೆಯಿತು; ಇನ್ನೂ ಬೆಳೆಯುತ್ತಲೇ ಇದೆ. ಆದರೆ ಈ ಬೆಳವಣಿಗೆ ಸಮತೂಕವಿಲ್ಲದ್ದಾಗಿ ಪ್ರಾದೇಶಿಕ ಅಸಮಾನತೆಗೆ ಕಾರಣವಾಗಿದೆ. ಬ್ಯಾಂಕಿಂಗ್ ಏನಿದ್ದರೂ ವ್ಯಾಪಾರ ಮತ್ತು ಲಾಭದ ದೃಷ್ಟಿಯನ್ನಿಟ್ಟುಕೊಂಡು ನಡೆಸುತ್ತಿದ್ದ ವ್ಯವಹಾರ. ಕೇವಲ ಕೆಲವು ಅಂತಸ್ತುಗಳ ಜನರಿಗೆ ಮಾತ್ರ ಇದು ಮೀಸಲಾಗಿತ್ತು. ಗ್ರಾಮಾಂತರ ಬಡಜನತೆಯಂತೂ ಬ್ಯಾಂಕಿನ ಹತ್ತಿರವೂ ಬರುವುದು ಅಸಾಧ್ಯವಾಗಿತ್ತು. ಈ ಕಾರಣಗಳೇ ಬ್ಯಾಂಕುಗಳ ರಾಷ್ಟ್ರೀಕರಣದ ಪರಿಣಾಮಕಾರಿ ತೀರ್ಮಾನಕ್ಕೆ ನಾಂದಿಯಾದುವು.

### ರಾಷ್ಟ್ರೀಕರಣದ ಉದ್ದೇಶಗಳು

ರಾಷ್ಟ್ರೀಕರಣದ ಉದ್ದೇಶಗಳು ಎಷ್ಟರ ಮಟ್ಟಿಗೆ ಸಫಲವಾಗಿದೆ ಎಂಬುದರ ಮೇಲೆ ಕಳೆದ ಹತ್ತು ವರುಷಗಳ ಸಾಧನೆ-ಸೋಲುಗಳನ್ನು ಅಳೆಯಬಹುದು:

1 ಕೆಲವು ಜನರ ಸ್ವಾಧೀನದಿಂದ ಬ್ಯಾಂಕುಗಳ ಬಿಡುಗಡೆ,

2 ಕೃಷಿಗೆ, ಸಣ್ಣ ಕೈಗಾರಿಕೆಗೆ, ರಫ್ತಿಗೆ—ಇದಕ್ಕೆಲ್ಲ ಸಾಲ ಪೂರೈಕೆ,

3 ವೃತ್ತಿಪರ ಬ್ಯಾಂಕ್ ಆಡಳಿತ ಹಾಗೂ ಸಿಬ್ಬಂದಿಗೆ ಬದಲಾವಣೆಗೆ ಹೊಂದುವಂಥ ಶಿಕ್ಷಣ,

4 ಆರ್ಥಿಕ ಅಸಮಾನತೆಯ ನಿರ್ಮೂಲನ—ಅದಕ್ಕಾಗಿ ದೇಶದ ಅಭ್ಯುದಯಕಾರ್ಯಗಳಲ್ಲಿ ಬ್ಯಾಂಕು ಠೇವಣಿಗಳ ಉಪಯೋಗ.

### ಸಾಧನೆಗಳು

ಕಳೆದ ಒಂದು ದಶಕದ ಬ್ಯಾಂಕಿಂಗ್ ಸಾಧನೆಗಳನ್ನು ವಿಮರ್ಶಿಸಿದಾಗ, ಮೇಲೆ ಕಾಣಿಸಿದ್ದರಲ್ಲಿ ಮೊದಲ ಉದ್ದೇಶ

ಬಹುತೇಕ ಸಫಲವಾಗಿದೆ. ಮಿಕ್ಕೆಲ್ಲವೂ ಗುರಿ ಮುಟ್ಟಲು ಬಹಳ ಹಿಂದೆ ಉಳಿದಿವೆ ಎಂದೇ ಹೇಳಬೇಕು. ಅಂಕಿ-ಅಂಶ ಗಳಿಂದ ರಾಷ್ಟ್ರೀಕರಣದ ಆಗು-ಹೋಗುಗಳನ್ನು ಅಳೆಯುವು ದಾದರೆ, ಬಹುಪಾಲು ಒಳ್ಳೆಯ ಕೆಲಸವಾಗಿರುವಂತೆ ಸೂಚಿತ ವಾಗುತ್ತದೆ.

—ಈ ಕಳೆದ ಹತ್ತು ವರುಷಗಳಲ್ಲಿ ಬ್ಯಾಂಕಿನ ಶಾಖೆಗಳು, ಹೊಸದಾಗಿ ತೆರೆದವುಗಳ ಸಂಖ್ಯೆ, 23,350 ನ್ನೂ ಮೀರಿದೆ.

—65,000 ಜನಸಂಖ್ಯೆಗೆ ಒಂದು ಶಾಖೆಯಿದ್ದು ಈಗ 19,000ಕ್ಕೆ ಒಂದರಂತೆ ಶಾಖೆಯಿದೆ.

—ಠೇವಣಿಗಳು ರೂ. 23,223 ಕೋಟಿ ಹೆಚ್ಚಾಗಿದೆ.

—ಆದ್ಯತೆಯ ಕ್ಷೇತ್ರದಲ್ಲಿ ರೂ. 4,768 ಕೋಟಿ ಸಾಲ ಕೊಡಲಾಗಿದೆ. ರೂ. 89 ಲಕ್ಷ ಸಾಲದ ಖಾತೆ ಗಳಾಗಿವೆ.

—ರಿಯಾಯ್ತಿ ಬಡ್ಡಿಯಲ್ಲಿ, ಭಿನ್ನಕ ಬಡ್ಡಿ ದರದಲ್ಲಿ, 17½ ಲಕ್ಷ ಮಂದಿಗೆ ಸಾಲ ಕೊಟ್ಟಿದೆ. ಈ ಸಾಲಗಳ ಮೊತ್ತ ಸುಮಾರು ರೂ. 103 ಕೋಟಿ.

—1969ರ ಜೂನ್‌ನಲ್ಲಿ 8,200 ಶಾಖೆಗಳಿದ್ದುವು. 1979ರಲ್ಲಿ ಈ ಸಂಖ್ಯೆ 30,200ನ್ನು ಮೀರಿದೆ.

—1969ರಿಂದ 1979ಕ್ಕೆ ಸಾಲದ ಮೊತ್ತ ಸುಮಾರು ಐದು ಪಟ್ಟು ಹೆಚ್ಚಾಗಿದೆ.

—ಆದ್ಯತೆಯ ಕ್ಷೇತ್ರದಲ್ಲಿ (ಕೃಷಿ, ಸಣ್ಣ ಕೈಗಾರಿಕೆ, ರಫ್ತು, ಸಾರಿಗೆ) ಗಮನಾರ್ಹ ಸಾಲ ನೀಡಿಕೆಯಾಗಿದೆ. ಹರಿಜನ-ಗಿರಿಜನರಿಗೆ ಹೆಚ್ಚಿನ ಸಂಖ್ಯೆ ಯಲ್ಲಿ, ಭಿನ್ನಕಬಡ್ಡಿ ದರದಲ್ಲಿ, ಹೆಚ್ಚು ಸಾಲ ಕೊಡಲಾಗಿದೆ.

## ಮುಗಿಯುದ ಯುದ್ಧ

ಇದೆಲ್ಲ ಸಂಖ್ಯಾದೃಷ್ಟಿಯಿಂದ ಹೆಚ್ಚು ಆಕರ್ಷಕವಾಗಿರ ಬಹುದು. ದೇಶದ ಸಮಸ್ಯೆಗಳನ್ನೂ ಅವುಗಳ ಗಾಢತೆ ಯನ್ನೂ ಗಮನಿಸಿದಾಗ ಇನ್ನೂ ಮುಗಿಯದ ಕೆಲಸಗಳು ಸಾವಿರ ಸಾವಿರವಾಗಿ ಉಳಿದಿವೆ ಎಂದು ಯಾರಿಗಾದರೂ ಹೊಳೆಯಬೇಕು.

1979–81ರ ಅವಧಿಯಲ್ಲಿ ಹೆಚ್ಚು ಶಾಖೆಗಳನ್ನು ತೆರೆಯಬೇಕೆಂಬುದಾಗಿ ಆದೇಶ ನೀಡಲಾಗಿದೆ. ನಗರ ಗಳಲ್ಲಿಯ ಕೈಗಾರಿಕೆಗಳಿಗಿಂತ ಗ್ರಾಮಾಂತರ ಪ್ರದೇಶಗಳಲ್ಲಿ ರುವ ಕಸುಬುಗಳಿಗೆ ಹೆಚ್ಚಿನ ಆದ್ಯತೆ ಕೊಡಬೇಕಾಗಿದೆ.

ಬ್ಯಾಂಕಿನ ಆಡಳಿತ ವರ್ಗದವರು ಈ ಹೊಸ ಜವಾಬ್ದಾ ರಿಯ ನಿರ್ವಹಣೆಯಲ್ಲಿ ತಮ್ಮ ಹಳೆಯ ರೀತಿ-ನೀತಿಗಳನ್ನು ಬದಲಾಯಿಸಬೇಕಾಗಿದೆ; ಬದಲಾಗುತ್ತಿರುವ ಸಾಮಾಜಿಕ ಹಾಗೂ ಆರ್ಥಿಕ ವ್ಯವಸ್ಥೆಗಳನ್ನು ಅರ್ಥಮಾಡಿಕೊಳ್ಳುವುದ ರಲ್ಲಿ ಹೊಸ ಹುರುಪನ್ನು ತೋರಬೇಕಾಗಿದೆ. ಈ ಹೊಸ ತಿರುವಿಗೆ ಬೇಕಾದ ಮಾನಸಿಕ ಬದಲಾವಣೆ ಆವಶ್ಯಕ. ಮಾಡಬೇಕಾದ ಕೆಲಸಗಳ ಹಿನ್ನೆಲೆಯಲ್ಲಿ ಕಳೆದ ಒಂದು ದಶಕದ ಸಾಧನೆಯ ಬಗ್ಗೆ ಕೆಲವು ಅನುಮಾನಗಳೆದ್ದಿವೆ. ದೇಶದ ಅಗಾಧವಾದ ಸಮಸ್ಯೆಗಳಿಂದಾಗಿ ಹೆಚ್ಚು ಮಾಡಲು ಬ್ಯಾಂಕಿಗೆ ಸಾಧ್ಯವಾಗದಿರಬಹುದು. ರಾಷ್ಟ್ರೀ ಕರಣದ ಅಧಿನಿಯಮದಲ್ಲಿ ಕಾಣಿಸಿದ ಉದ್ದೇಶಗಳು ಇನ್ನೂ ಪೂರೈಕೆಯಾಗಲು ಕಾರ್ಯಪ್ರವೃತ್ತರಾಗಬೇಕಲ್ಲದೆ ಕ್ರಾಂತಿ ಕಾರಕ ಬದಲಾವಣೆಗಳಾಗಳನ್ನು ಮಾಡಬೇಕು—ರಾಷ್ಟ್ರೀ ಕರಣದ ಅಧಿನಿಯಮದಲ್ಲಿರುವ ಹೇಳಿಕೆಯಿದು: "ಆರ್ಥಿ ಕತೆಯ ಔನ್ನತ್ಯಗಳನ್ನು ನಿಯಂತ್ರಿಸುವುದು, ರಾಷ್ಟ್ರದ ನೀತಿ ಹಾಗೂ ಉದ್ದೇಶಗಳಿಗೆ ಹೊಂದಿಕೊಳ್ಳುವಂತೆ ಆರ್ಥಿಕತೆಯ ಅಭಿವೃದ್ಧಿಯ ಆವಶ್ಯಕತೆಗಳನ್ನು ಅಧಿಕಾಧಿಕ ವಾಗಿ ಪೂರೈಸುವುದು ಹಾಗೂ ಇನ್ನೂ ಉತ್ತಮವಾಗಿ ಅದಕ್ಕೆ ಸೇವೆ ಸಲ್ಲಿಸುವುದು." ಈ ದೃಷ್ಟಿಯಿಂದ ಮುಗಿಯದ ಕೆಲಸ ಬಹಳವಿದೆ. ಬ್ಯಾಂಕಿನ ದೃಷ್ಟಿಕೋನ ಬದಲಾಗಬೇಕು; ಅದರ ಸಲಕರಣೆಗಳು ಹೆಚ್ಚಾಗಬೇಕು; ಇದರೊಂದಿಗೆ ಪ್ರಾಂತೀಯ ಅಸಮಾನತೆಗಳು ತೊಲಗಿ ಗ್ರಾಮಗಳ ಪುನರ್ನಿರ್ಮಾಣವಾಗಬೇಕು. ಭವಿಷ್ಯದ ಕಡೆಗೆ ಇಣುಕಿದಾಗ ಸಮಸ್ಯೆಗಳ ಅಗಾಧತೆ ಅರ್ಥವಾಗುತ್ತದೆ.

ಹಿಂದುಳಿದ ಕೆಲವು ದೇಶಗಳು ನಮ್ಮ ದೇಶದ ಸಾಧನೆಗಳ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿವೆ. ವಾಣಿಜ್ಯ ಬ್ಯಾಂಕುಗಳ ಶಾಖೆಗಳು 60,000ಕ್ಕೂ ಮೀರಿ ಹೋಗುವ ಸಂಭವವಿದೆ. ಅದರಿಂದಾಗಿ ಕೆಲಸಗಾರರು 10 ಲಕ್ಷಕ್ಕೂ ಹೆಚ್ಚುಬೇಕು. ಬ್ಯಾಂಕಿನ ಠೇವಣಿಗಳು ರೂ. 50,000 ಕೋಟಿ ಯನ್ನು ದಾಟುವ ನಿರೀಕ್ಷೆಯಿದೆ. ಇದರಿಂದ ನಮ್ಮ ಮುಂದಿರುವ ವರುಷಗಳಲ್ಲಿ ಎದುರಿಸಬೇಕಾದ ಸಮಸ್ಯೆಗಳ ಆಳ-ಅಗಲಗಳ ಸೂಕ್ಷ್ಮ ಪರಿಚಯ ಆಗಬಹುದು. ಬ್ಯಾಂಕು ಗಳ ಬಗ್ಗೆ ಜನತೆಯ ಅಪೇಕ್ಷೆ–ನಿರೀಕ್ಷೆಗಳೂ ದಿನದಿನವೂ ಹೆಚ್ಚಾಗುತ್ತಿವೆ.

ಆಗುತ್ತಿರುವ ಪ್ರಮುಖ ಬದಲಾವಣೆಗಳಿಗೆ ಹೊಂದಿ ಕೊಳ್ಳಲು ಒಂದು ಕೇಂದ್ರ ಸಂಶೋಧನ ಸಿಬ್ಬಂದಿಯ ಆವಶ್ಯಕತೆ ಇದ್ದು, ಬದಲಾವಣೆಗಳ ಬಗ್ಗೆ ಮಾಹಿತಿಯನ್ನು ಶೇಖರಿಸುವ, ವಿತರಿಸುವ ಕಾರ್ಯವಾಗಬೇಕು.

ಹಿಂದಿನ ರೀತಿಯ ವ್ಯಾಪಾರಿ ಮನೋಭಾವವನ್ನು ತೊರೆದು ಸಾಮಾಜಿಕ ಪ್ರಜ್ಞೆಯನ್ನು ಬೆಳೆಸಿಕೊಳ್ಳಬೇಕು. ಸಮಾಜದ ನಿರ್ಲಕ್ಷಿತ ಜನರ ದಾರಿದ್ರ್ಯ ನಿವಾರಣೆಗೆ, ಜೀವನ ಮಟ್ಟ ಹೆಚ್ಚಿಸಲಿಕ್ಕೆ ಒಂದು ಅವಕಾಶ ದೊರಕಿದೆ ಎಂಬ ಸೇವಾ ಮನೋಭಾವದಿಂದ ಕೆಲಸ ಮಾಡುವ ಸಿಬ್ಬಂದಿ ಹೆಚ್ಚಿನ ಸಂಖ್ಯೆಯಲ್ಲಿ ಬರಬೇಕು.

# ಕೈಕಸುಬುದಾರರ ಅಭಿವೃದ್ಧಿಯಲ್ಲಿ ಭಾರತದ ಬ್ಯಾಂಕುಗಳ ಪಾತ್ರ

ಡಾ. ಅಬ್ದುಲ್ ಅಜೀಸ್

**ಕಾರೇಗಾರರ ಪುರೋಗಮನವನ್ನು ಸಾಧಿಸುವತ್ತ ಬ್ಯಾಂಕುಗಳ ಪ್ರಯತ್ನ ಎಷ್ಟರಮಟ್ಟಿಗೆ ಯಶಸ್ವಿಯಾಗಿದೆ ಎಂಬುದನ್ನು ಲೇಖಕರು ಇಲ್ಲಿ ವಿವೇಚಿಸಿ, ಈ ಸಮಸ್ಯೆಗೆ ತಮ್ಮುವೇ ಆದ ಉಪಾಯಗಳನ್ನು ಸೂಚಿಸಿದ್ದಾರೆ**

ಭಾರತ ಹಳ್ಳಿಗಳ ನಾಡು. ಹಳ್ಳಿಗಳ ಉದ್ಯೋಗಗಳ ಪೈಕಿ ಕೃಷಿಯದೇ ಮೇಲುಗೈ. ಆದರೆ ಅಲ್ಲಿ ಕೈಗಾರಿಕಾ ಕ್ಷೇತ್ರಕ್ಕೆ ಸೇರಬಹುದಾದ ಅನೇಕ ಕೈಕಸುಬುಗಳೂ ಕಂಡು ಬರುತ್ತವೆ. ಇಂಥ ಕಸುಬುಗಳಲ್ಲಿ ನಿರತರಾದ ಕಾರೇಗಾರರ—ಬಡಗಿ, ಕಮ್ಮಾರ, ಕುಂಬಾರ, ನೇಕಾರ, ಚಿಪ್ಪಿಗ, ಅಗಸ, ನಾಯಿಂದ, ಗೊಂಬೆಗಾರ, ಬುಟ್ಟಿ ಹೆಣೆಯುವವ ಮುಂತಾದವರ—ಸಂಖ್ಯೆ ಹಾಗೂ ಉತ್ಪಾದನ ಮೌಲ್ಯ ಗಮನಾರ್ಹವಾದವು. ರಾಜ್ಯ ಆರ್ಥಿಕ ಸಲಹೆಗಾರರ ವಿಭಾಗದ ಒಂದು ಅಂದಾಜಿನ ಪ್ರಕಾರ ಕರ್ನಾಟಕದಲ್ಲಿ ಐದು ಲಕ್ಷ ಎಪ್ಪತ್ತೆರಡು ಸಾವಿರ ಕೈ-ಕಸುಬುದಾರರಿದ್ದು ಅವರ ವಾರ್ಷಿಕ ಉತ್ಪಾದನ ಮೌಲ್ಯ ಸುಮಾರು 266 ಕೋಟಿ ರೂಪಾಯಿಗಳಷ್ಟು. ಇದು ಸ್ಥೂಲವಾಗಿ ರಾಜ್ಯದ ವರಮಾನದ ಸೇ. 9–10ರಷ್ಟು.

ಆರ್ಥಿಕತೆಯಲ್ಲಿ ಕಾರೇಗಾರರ ಪಾತ್ರ ಗಮನಾರ್ಹವಾದದ್ದಾದರೂ ಅವರ ಸಮಸ್ಯೆಗಳು ಅನೇಕ. ಕೆಲವು ಕೈಕಸುಬುದಾರರಿಗೆ ಮಾರುಕಟ್ಟೆಯ ಅಭಾವದ ಸಮಸ್ಯೆ. ಧಾರಾಳವಾದ ಮಾರುಕಟ್ಟೆಯಿರುವಂಥ ಕಸುಬುದಾರರಿಗೆ—ಉದಾ: ಚನ್ನಪಟ್ಟಣದ ಗೊಂಬೆಗಾರರಿಗೆ—ಮಧ್ಯವರ್ತಿಗಳ ಹಾವಳಿ. ಎಲ್ಲ ಕಾರೇಗಾರರೂ ಒಂದಲ್ಲ ಒಂದು ರೀತಿಯಲ್ಲಿ ಅನುಭವಿಸುತ್ತಿರುವ ಎರಡು ಮುಖ್ಯ ತೊಂದರೆಗಳೆಂದರೆ ಕಚ್ಚಾಸಾಮಗ್ರಿಗಳು ಸಮಯಕ್ಕೆ ಸಿಗದಿರುವುದು ಹಾಗೂ ಅವುಗಳ ಬೆಲೆಯ ನಿರಂತರ ಏರಿಕೆ. ಇವುಗಳ ಜೊತೆಗೆ ಕಾರೇಗಾರರ ಹಣಕಾಸಿನ ಅಗತ್ಯಗಳನ್ನು ಸಂಪೂರ್ಣವಾಗಿ ಪೂರೈಸುವಂಥ ಸಾರ್ವಜನಿಕ ಏರ್ಪಾಡಿನ ಕೊರತೆ. ಕಾರೇಗಾರರ ಹಣಕಾಸಿನ ಅಗತ್ಯಗಳು, ಅವನ್ನು ಪೂರೈಸುವುದರಲ್ಲಿ ಬ್ಯಾಂಕುಗಳು ವಹಿಸಿರುವ ಹಾಗೂ ವಹಿಸಬೇಕಾದ ಪಾತ್ರ ಇವನ್ನು ಕುರಿತು ಎರಡು ಮಾತುಗಳನ್ನು ಹೇಳುವುದು ಈ ಲೇಖನದ ಉದ್ದೇಶ.

### ಹಣಕಾಸಿನ ಅಗತ್ಯ

ಕಾರೇಗಾರನಿಗೆ ಸಾಮಾನ್ಯವಾಗಿ ಉಪಕರಣ, ಕಚ್ಚಾ ಸಾಮಗ್ರಿ ಮುಂತಾದ ಆವಶ್ಯಕ ವಸ್ತುಗಳನ್ನು ಕೊಳ್ಳುವುದಕ್ಕಾಗಿ ಹಣಕಾಸಿನ ಅಗತ್ಯ ಉಂಟಾಗುತ್ತದೆ. ಈ ಆವಶ್ಯಕತೆ ಒಂದೊಂದು ಕಸುಬಿಗೆ ಒಂದೊಂದು ಗಾತ್ರದ್ದಾಗಿರುತ್ತದೆ. ಆದರೆ ಮೇಲೆ ಉಲ್ಲೇಖಿಸಿದ ಆರ್ಥಿಕ ಸಲಹೆಗಾರರ ವಿಭಾಗದ ಅವಲೋಕನದ ಪ್ರಕಾರ ಕಾರೇಗಾರನ ಸಾಲಿಯಾನ ಸರಾಸರಿ ಸಾಲದ ಅಗತ್ಯ ಸುಮಾರು ಒಂಬೈನೂರು ರೂಪಾಯಿಗಳು. ಇದರಂತೆ ಇಡೀ ಕರ್ನಾಟಕದ ಕೈಕಸುಬುದಾರರ ಒಟ್ಟು ಸಾಲದ ಅಗತ್ಯ ವರ್ಷಕ್ಕೆ ಸುಮಾರು ಐವತ್ತೆರಡು ಕೋಟಿ ರೂಪಾಯಿಗಳು ಎಂದು ಅಂದಾಜು ಮಾಡಲಾಗಿದೆ.

ಇದರ ಪೈಕಿ ಕರ್ನಾಟಕದಲ್ಲಿ ಸಾರ್ವಜನಿಕ ಹಣಕಾಸು ಕ್ಷೇತ್ರದಿಂದ ಕಾರೇಗಾರರು ಸಾಲರೂಪದಲ್ಲಿ ಎಷ್ಟು ಹಣ ಪಡೆಯುತ್ತಿರುವರೋ ವಿವರವಾಗಿ ಹೇಳುವಂತಿಲ್ಲ. ಸಾಲ ಪಡೆದಿರುವ ಕಾರೇಗಾರರ ಪೈಕಿ ಸುಮಾರು ಮುಕ್ಕಾಲು ಪಾಲು ಮಂದಿ ಖಾಸಗಿ ಮೂಲಗಳಿಂದ ಅದನ್ನು ಪಡೆದಿದ್ದಾರೆಂಬುದು ಒಂದು ಅವಲೋಕನದ ಅಂದಾಜು. ಎಂದ ಮೇಲೆ ಕಾರೇಗಾರರಿಗೆ ಸಾಲ ನೀಡುವುದರಲ್ಲಿ ಸರ್ಕಾರಿ ಕ್ಷೇತ್ರದ ಪಾತ್ರ ಎಷ್ಟು ಅಲ್ಪವೆಂಬುದು ಗೊತ್ತಾಗುತ್ತದೆ.

ದುರ್ಬಲ ವರ್ಗಗಳಿಗೆ ಸಾಲಸೌಲಭ್ಯ ಒದಗಿಸಬೇಕೆಂಬ ಧ್ಯೇಯದಿಂದ ರಾಷ್ಟ್ರದ ಪ್ರಮುಖ ಬ್ಯಾಂಕುಗಳನ್ನು ರಾಷ್ಟ್ರೀಕರಿಸಲಾಯಿತಾದರೂ ಇದರಿಂದ ಪರಿಸ್ಥಿತಿ ಉತ್ತಮಗೊಳ್ಳದಿರುವುದು ಆಶ್ಚರ್ಯಕರ ಸಂಗತಿಯೇ ಸರಿ.

### ಸಾರ್ವಜನಿಕ ಸಂಸ್ಥೆಗಳ ವಿಫಲತೆ

ಬ್ಯಾಂಕುಗಳು ಹಾಗೂ ಇತರ ಸಾರ್ವಜನಿಕ ಹಣಕಾಸು ಸಂಸ್ಥೆಗಳು ಕಾರೇಗಾರರ ಹಣಕಾಸಿನ ಅಗತ್ಯಗಳನ್ನು ಪೂರೈವುದರಲ್ಲಿ ಸಫಲವಾಗದಿರಲು ಕಾರಣಗಳೇನೆಂಬುದರ ಖಚಿತವಾದ ವಿವರಣೆ ಬಂದಿಲ್ಲ. ಆದರೂ ಚನ್ನಪಟ್ಟಣ ತಾಲ್ಲೂಕಿನಲ್ಲಿ ನಾನು ಕೈಗೊಂಡ ಅಧ್ಯಯನದಿಂದ ಈ ಬಗ್ಗೆ ಕೆಲವು ಅಂಶಗಳು ಬೆಳಕಿಗೆ ಬಂದಿವೆ. ಸಂದರ್ಶಿಸಲಾದ ನೂರೊಂದು ಕಾರೇಗಾರರ ಪೈಕಿ ನಲವತ್ತೈದು ಮಂದಿ ಮಾತ್ರ ಕೈಗಾರಿಕಾ ಬ್ಯಾಂಕುಗಳಿಂದ ಸಾಲ ಪಡೆಯುವುದರಲ್ಲಿ ಸಫಲರಾಗಿದ್ದವರು. ಉಳಿದವರ ಪೈಕಿ ಮೂವತ್ತೇಳು ಮಂದಿ ಸಾಲಕ್ಕಾಗಿ ಅಪೇಕ್ಷೆ ಸಲ್ಲಿಸಿದ್ದರೂ ಇದನ್ನು ಪಡೆಯುವುದರಲ್ಲಿ ಸಫಲರಾಗಲಿಲ್ಲ. ಇದಕ್ಕೆ ಅವರೇ ಕೊಟ್ಟ ಕಾರಣಗಳು ಇವು:

1 ಗೊಂಬೆ ಕಾರೆಗಾರರೂ ಅವರಲ್ಲಿಯ ಕೂಲಿ ಕೆಲಸಗಾರರೂ ಕೈಗಾರಿಕಾ ಸಾಲಕ್ಕೆ ಅರ್ಹರೆನಿಸಲಿಲ್ಲ.

2 ಒತ್ತೆ ಇಡಲು ಅವರಲ್ಲಿ ಯಾವ ಆಸ್ತಿಯೂ ಇರಲಿಲ್ಲ.

3 ಲಂಚ ನೀಡಲು ಅವರಲ್ಲಿ ಸಾಮರ್ಥ್ಯವಿಲ್ಲ.

4 ಸಾಲ ಮರುಪಾವತಿ ಮಾಡುವ ಸಾಮರ್ಥ್ಯ ಇಲ್ಲ.

5 ಸಾಲ ಪಡೆಯುವಷ್ಟು ಪ್ರಭಾವಶಾಲಿಗಳಲ್ಲ.

6 ಅಧಿಕಾರಿಗಳು ಉದಾಸೀನರಾಗಿದ್ದರು.

7 ಕೇವಲ ಸಾಲದಿಂದಲೇ ಪ್ರಯೋಜನವಿಲ್ಲ.

8 ಲಭ್ಯವಿರುವ ಸಾಲಸೌಲಭ್ಯಗಳ ಬಗ್ಗೆ ತಿಳಿವಳಿಕೆಯಿಲ್ಲ.

ಆಶ್ಚರ್ಯವನ್ನುಂಟು ಮಾಡುವಂಥ ಕೆಲವು ಅಂಶಗಳು ಮೇಲಿನ ವಿವರಣೆಯಲ್ಲಿವೆ. ಭಿನ್ನಕ ಬಡ್ಡಿ ದರದ ವ್ಯವಸ್ಥೆಯಲ್ಲಿ (ಇಲ್ಲಿ ಸೂಚಿಸಿರುವ ಕಾರೇಗಾರರು ಸಾಲ ಪಡೆದಿರುವುದು ಈ ವ್ಯವಸ್ಥೆಯ ಪ್ರಕಾರವಾಗಿಯೇ) ಸಾಲ ಪಡೆಯಲು ಕೂಲಿಗಾರ ಕಾರೇಗಾರ ಅರ್ಹನಲ್ಲದಿದ್ದರೂ ಸ್ವಯಂ ಉದ್ಯೋಗಿಯಾದ ಗೊಂಬೆಕಾರನೂ ಸಾಲಕ್ಕೆ ಅನರ್ಹನೆಂದು ತಿಳಿಸಿರುವುದು ಸರಿಯಲ್ಲ. ಸ್ವಯಂ ಉದ್ಯೋಗಿಯಾದ ಯಾವನೇ ಕಸುಬುದಾರನಾಗಲಿ, ಈ ವ್ಯವಸ್ಥೆಯ ಅಡಿಯಲ್ಲಿ ಸಾಲ ಪಡೆಯಲು ಅರ್ಹನಾಗಿರುತ್ತಾನೆ. ಎರಡನೆಯದಾಗಿ, ಕಸಬುದಾರ ಆಸ್ತಿಯನ್ನು ಒತ್ತೆ ಇಡಬೇಕೆಂಬ ನಿಬಂಧನೆ ಈ ವ್ಯವಸ್ಥೆಯಲ್ಲಿ ಇಲ್ಲ. ಆದರೂ ಒತ್ತೆಯಿಡಲು ಆಸ್ತಿಯಿಲ್ಲವೆಂಬ ಕಾರಣದಿಂದ ಸಾಲ ನೀಡದಿರುವುದು ಆಶ್ಚರ್ಯದ ಸಂಗತಿ. ಸಾಲದ ಸೌಕರ್ಯ ಲಭ್ಯತೆಯ ತಿಳಿವಳಿಕೆ ಅನೇಕರಿಗೆ ಇಲ್ಲದಿರುವುದು ಇನ್ನೂ ಆಶ್ಚರ್ಯ. ಸಾಲವನ್ನು ಅಪೇಕ್ಷಿಸುವವರಿಗೂ ಸಾಲ ನೀಡುವ ಸಂಸ್ಥೆಗಳಿಗೂ ನಡುವೆ ಇರುವ ಅಂತರವನ್ನು ಈ ಎಲ್ಲ ಅಂಶಗಳೂ ಸೂಚಿಸುತ್ತವೆ. ಅಧಿಕಾರಿಗಳ ಔದಾಸೀನ್ಯ, ಲಂಚಗುಳಿತನ, ಅವರು ಪ್ರಭಾವಗಳಿಗೆ ಒಳಗಾಗುವುದು—ಇವನ್ನು ಕುರಿತು ಇಲ್ಲಿ ಏನೂ ಹೇಳದಿರುವುದೇ ಮೇಲು. ಇವು ಈ ಲೇಖನದ ವ್ಯಾಪ್ತಿಗೆ ಒಳಪಡುವ ವಿಚಾರಗಳಲ್ಲ.

ದುರ್ಬಲ ವರ್ಗಗಳಿಗೆ ಹಣಕಾಸು ಸೌಲಭ್ಯವನ್ನು ಒದಗಿಸಿಕೊಡುವುದರ ಮೂಲಕ ಸಾಮಾಜಿಕ ನ್ಯಾಯವನ್ನು ದೊರಕಿಸಿದಂತಾಗುವುದೆಂಬ ಅಂಶವನ್ನು ಬ್ಯಾಂಕುಗಳು ಒಪ್ಪಿಕೊಳ್ಳುವುದರಲ್ಲಿ ಸಂದೇಹವಿಲ್ಲ. ಆದರೆ ಅವು ತಮ್ಮ ಚಟುವಟಿಕೆಗಳನ್ನು ಲಾಭದಾಯಕವಾಗಿ ನಡೆಸಬೇಕೆಂಬ ನಿಯಮವೂ ಉಂಟಲ್ಲವೆ? ಈ ವರ್ಗಗಳಿಗೆ ಸಾಲ ಸೌಲಭ್ಯವನ್ನು ಒದಗಿಸುವುದರಲ್ಲಿ ಎರಡು ಬಗೆಯ ತೊಂದರೆಗಳು ಉದ್ಭವಿಸುವ ಸಂಭವವಿದೆ:

1 ಸಾಲಗಳು ಸಣ್ಣ ಮೊತ್ತದವುಗಳಾದರೂ ಅಧಿಕ ಸಂಖ್ಯೆಯ ಖಾತೆಗಳನ್ನು ನಿರ್ವಹಿಸಬೇಕಾದ್ದರಿಂದ ಈ ವ್ಯವಸ್ಥೆಯಲ್ಲಿ ಬ್ಯಾಂಕು ಸಿಬ್ಬಂದಿ ವ್ಯಯಿಸಬೇಕಾಗುವ ಶ್ರಮ ಅಧಿಕವಾದ್ದಾಗಿರುತ್ತದೆ.

2 ಇತರ ಸಾಲಗಾರರೊಂದಿಗೆ ಹೋಲಿಸಿದಾಗ ಇಲ್ಲಿ ಸಾಲ ತೀರಿಸುವವರ ಸಂಖ್ಯೆ ಕಡಿಮೆ. ಆದ್ದರಿಂದ ಬ್ಯಾಂಕುಗಳು ನಷ್ಟ ಅನುಭವಿಸಬೇಕಾಗುತ್ತದೆ.

ಈ ಕಾರಣಗಳಿಂದ ಬ್ಯಾಂಕುಗಳು ದುರ್ಬಲವರ್ಗದವರಿಗೆ ಸಾಲ ನೀಡುವ ವಿಚಾರದಲ್ಲಿ ಅಷ್ಟೊಂದು ಧಾರಾಳವಾಗಿ ಇರದಿರುವುದು ಸ್ವಾಭಾವಿಕವೇ.

### ಪರಿಹಾರ

ಆದರೆ ದುರ್ಬಲ ವರ್ಗಗಳ ಸಾಲದ ಅಗತ್ಯಗಳನ್ನು ಪೂರೈಸುವುದಕ್ಕೆ ಇರುವ ಮಾರ್ಗ ಯಾವುದು? ಈ ಸಮಸ್ಯೆಯ ಸಂಶೋಧನೆ ನಡೆಸುತ್ತಿರುವ, ಸ್ವತಃ ಬ್ಯಾಂಕ್ ಅಧಿಕಾರಿಯಾಗಿರುವ ಶ್ರೀ ಸುಧಾಂಶುರಾನಡೆ ಅವರು ಒಂದು ಸಲಹೆ ನೀಡಿದ್ದಾರೆ. ಕಾರೇಗಾರರಿಗೆ ವೈಯಕ್ತಿಕವಾಗಿ ಬ್ಯಾಂಕು ಸಾಲ ನೀಡಿ ನೇರವಾಗಿ ಅವರೊಂದಿಗೆ ಸಂಪರ್ಕ ಏರ್ಪಡಿಸಿಕೊಳ್ಳುವುದರ ಬದಲು, ಬ್ಯಾಂಕಿನ ತಾಂತ್ರಿಕ ಅಧಿಕಾರಿಯೊಬ್ಬರು ಅವರನ್ನು ಸಹಕಾರಿ ಉತ್ಪಾದನ ಘಟಕದಲ್ಲಿ ಒಂದುಗೂಡಿಸಿ ಆ ಮೂಲಕ ಉತ್ಪಾದನ ಕಾರ್ಯವನ್ನು ಕೈಗೊಳ್ಳಬೇಕು. ಬ್ಯಾಂಕು ಅಧಿಕಾರಿ ಅಂಥ ಸಹಕಾರಿ ಘಟಕದಲ್ಲಿ ನೇಮಕಗೊಂಡು ಅದರಿಂದಲೇ ತನ್ನ ಸಂಬಳವನ್ನು ಪಡೆಯುವವನಾಗಿ ಸಹಕಾರಿ ಉತ್ಪಾದನೆ ಮತ್ತು ಮಾರುಕಟ್ಟೆ ವಿಷಯದಲ್ಲಿ ತಾಂತ್ರಿಕ ಸಲಹೆ ನೀಡುವುದಲ್ಲದೆ ಅವನೇ ಅದರ ಕಾರ್ಯನಿರ್ವಹಣೆಯನ್ನು ವಹಿಸಿಕೊಳ್ಳಬೇಕು. ಕಾರೇಗಾರರು ಪ್ರಾರಂಭದಲ್ಲಿ ಕೂಲಿಗಾರರಂತೆ ಕೆಲಸ ಮಾಡುತ್ತಿದ್ದು ನಿಗದಿಯಾದ ಕೂಲಿಯನ್ನು ಪಡೆಯಬೇಕು. ಉತ್ಪಾದನ ಘಟಕ ಸ್ಥಿರಗೊಂಡು, ಅದರ ಲಾಭ

ದಿಂದ ಸಾಲವನ್ನು ತೀರಿಸಿದ ಅನಂತರ ಅದನ್ನು ಕಾರೇಗಾರರ ವಶಕ್ಕೆ ವಹಿಸಿ ಬ್ಯಾಂಕು ಅಧಿಕಾರಿ ತನ್ನ ಬ್ಯಾಂಕಿಗೆ ವಾಪಸಾಗ ಬೇಕು. ಇಲ್ಲಿಂದ ಮುಂದೆ ಕಾರೇಗಾರರು ಆ ಉದ್ಯಮವನ್ನು ತಮ್ಮದೇ ಆದ ಸಹಕಾರಿ ಉತ್ಪಾದನ ಘಟಕದ ಅಡಿಯಲ್ಲಿ ನಡೆಸಿಕೊಂಡು ಹೋಗಬೇಕು. ಇದು ಶ್ರೀ ರಾನಡೆಯವರ ಸಲಹೆ. ಈ ವ್ಯವಸ್ಥೆಯ ಅನುಕೂಲಗಳು ಇವು: 1 ಬ್ಯಾಂಕು ಅಮಿತವಾದ ಖಾತೆಗಳನ್ನು ನಿರ್ವಹಿಸುತ್ತ ನಿರ್ವಹಣಾ ವೆಚ್ಚವನ್ನು ಹೆಚ್ಚಿಸಿಕೊಳ್ಳಬೇಕಾಗುವುದಿಲ್ಲ. 2 ಉತ್ಪಾದನೆ ಮತ್ತು ಮಾರುಕಟ್ಟೆ ಚಟುವಟಿಕೆಗಳನ್ನು ತಾಂತ್ರಿಕ ಅಧಿಕಾರಿ ನಿರ್ವಹಿಸುತ್ತ, ಯುಕ್ತ ಸಲಹೆಗಳನ್ನು ಕೊಡುವುದರಿಂದ ನಷ್ಟ ಸಂಭವ ಇಲ್ಲದಂತಾಗಿ ಸಾಲ ತೀರುವಿಕೆಗೆ ತೊಂದರೆ ಉಂಟಾಗುವುದಿಲ್ಲ.

ಮೇಲುನೋಟಕ್ಕೆ ಈ ವ್ಯವಸ್ಥೆ ಅತ್ಯಂತ ಸಮರ್ಪಕವೂ, ಆಕರ್ಷಕವೂ ಆಗಿ ಕಂಡರೂ ಇದರ ಕೆಲವು ಇತಿ-ಮಿತಿಗಳನ್ನು ಗಮನಿಸುವುದು ಅವಶ್ಯಕ. ಒಂದನೆಯದಾಗಿ, ಈ ಉತ್ಪಾದನ ಘಟಕ ಬ್ಯಾಂಕಿನ ತಾಂತ್ರಿಕ ಅಧಿಕಾರಿಯ ಸಂಬಳ ಮುಂತಾದುವನ್ನು ಪಾವತಿ ಮಾಡುವಷ್ಟು ಸಮರ್ಥವಾಗಿರಲಾರದು.. ಏಕೆಂದರೆ ಕಾರೇಗಾರ ಕಸುಬುಗಳಲ್ಲಿ ಉತ್ಪಾದನೆಯ ಸಂಘಟನೆಗಿಂತ ಮಾರುಕಟ್ಟೆಯ ಲಭ್ಯತೆಯ ಸಮಸ್ಯೆ ತೀವ್ರವಾದದ್ದು. ಕಾರೇಗಾರರ ಕಸುಬುಗಳು ಈಗ ಲಾಭದಾಯಕವಾಗದಿರಲು ಕಾರಣವೆಂದರೆ, ಅವರ ಸರಕುಗಳಿಗೆ ಮಾರುಕಟ್ಟೆ ಇಲ್ಲದಿರುವುದು. ಎರಡನೆಯದಾಗಿ, ಹಣಕಾಸು ನಿರ್ವಹಣೆಯಲ್ಲಿ ಬ್ಯಾಂಕುಗಳ ಮಾಮೂಲು ಕಾರ್ಯಭಾರ. ಅವು ಉತ್ಪಾದನೆ, ಮಾರುಕಟ್ಟೆ ಮುಂತಾದ ಕಾರ್ಯಗಳನ್ನು ತಮ್ಮ ಕಲಾಪಗಳ ಪಟ್ಟಿಯಲ್ಲಿ ಸೇರಿಸಿಕೊಳ್ಳಲು ಒಪ್ಪುವುದು ಸಂದೇಹಕರ. ಕೊನೆಯದಾಗಿ, ಕಾರೇಗಾರರಲ್ಲಿ ಸರಕು ಉತ್ಪಾದಿಸುವವ ಅಲ್ಲದೆ, ಅಗಸ, ನಾಯಿಂದ ಮುಂತಾದ ಸೇವೆ ನೀಡುವವರೂ ಉಂಟು. ಇವರನ್ನು ಸಾಮೂಹಿಕವಾಗಿ ಒಂದುಗೂಡಿಸಿ ಇವರ ಸೇವೆಯನ್ನು ಮಾರಾಟ ಮಾಡುವುದಾದರೂ ಹೇಗೆ? ಇಂಥವರನ್ನು ಈ ವ್ಯವಸ್ಥೆಯಿಂದ ಕೈ ಬಿಡುವಂತಿದ್ದರೆ ಅವರಿಗೆ ನೇರವಾಗಿ ಸಾಲ ಸೌಲಭ್ಯಗಳನ್ನು ಒದಗಿಸಬೇಕಾಗುತ್ತದೆ. ಆದ್ದರಿಂದ ಬ್ಯಾಂಕಿನ ತೊಂದರೆ ಸಂಪೂರ್ಣವಾಗಿ ನಿವಾರಿಸಲ್ಪಟ್ಟಂತಾಗುವುದಿಲ್ಲ.

ಈ ಎಲ್ಲ ಅಂಶಗಳ ಹಿನ್ನೆಲೆಯಲ್ಲಿ ನಾವು ಹೊಸದಾದ ಉಪಾಯವನ್ನೇ ಹುಡುಕುವುದು ಅಗತ್ಯವಾಗುತ್ತದೆ. ಈ ಬಗ್ಗೆ ನನ್ನ ಅಭಿಪ್ರಾಯಗಳನ್ನು ಮಂಡಿಸಬಿಚ್ಛಿಸುತ್ತೇನೆ. ಕಾರೇಗಾರರ ಕಸುಬು ಸ್ವಯಂ ಉದ್ಯೋಗ ನೀಡುವಂಥವಾಗಿದ್ದು. ಅದು ತನ್ನ ಸ್ವರೂಪವನ್ನು ಉಳಿಸಿ ಬೆಳೆಸಿಕೊಳ್ಳುವುದರಲ್ಲಿ ಅನುಕೂಲವಿದೆ ಎಂಬುದು ಸ್ಪಷ್ಟವಾಗಿದೆ. ಕಾರೇಗಾರನಿಗೆ ಬೇಕಾಗಿರುವ ಹಣಕಾಸಿನ ಪೂರೈಕೆಗಾಗಿ ಹೊಸದಾಗಿ ಯಾವ ವ್ಯವಸ್ಥೆಯನ್ನೂ ರೂಪಿಸುವ ಆವಶ್ಯಕತೆಯಿಲ್ಲ. ಅವನ ಹಣಕಾಸಿನ ಅಗತ್ಯಗಳನ್ನು ನೇರವಾಗಿ ಪೂರೈಸುವುದು ಉತ್ತಮ. ಆದ್ದರಿಂದ ಬ್ಯಾಂಕುಗಳು ಕಾರೇಗಾರರ ಹಣಕಾಸಿನ ಅಗತ್ಯಗಳನ್ನು ಅಂದಾಜು ಮಾಡಿ, ಅದನ್ನು ಅವನಿಗೇ ನೀಡಬೇಕು. ಆದರೆ ಸಾಲ ತೀರುವ ಸಮಸ್ಯೆಯನ್ನು ನಿವಾರಿಸಬೇಕಾದ್ದರಿಂದ ಬ್ಯಾಂಕುಗಳು ಕಾರೇಗಾರರ ಯೋಜನೆಗಳನ್ನು ಪರಿಶೀಲಿಸಿ ಅವು ಲಾಭದಾಯಕವಾಗಿವೆಯೆನಿಸಿದಾಗ ಮಾತ್ರ ಸಾಲವನ್ನು ನೀಡಬೇಕಾಗುತ್ತದೆ ಎಂದ ಮೇಲೆ ಲಾಭದಾಯಕ ಯೋಜನೆಗಳನ್ನು ರೂಪಿಸುವಂಥ ಕಾರೇಗಾರರನ್ನು ಗುರುತಿಸುವ ಮೇಲ್ತರದ ಕಾರ್ಯ ಒಂದಿದೆ ಎಂದಹಾಗಾಯಿತು. ಎರಡನೆಯದಾಗಿ, ಹಿಂದೆ ವಿವೇಚಿಸಲಾದಂತೆ ಹಣಕಾಸು ಸಂಸ್ಥೆ ಮತ್ತು ಕಾರೇಗಾರರ ನಡುವಣ ಸಂಪರ್ಕದ ಅಂತರವನ್ನು ತೊಡೆದು ಹಾಕುವ ದೃಷ್ಟಿಯಿಂದ ಕಾರೇಗಾರರಿಗೆ ತಿಳಿವಳಿಕೆ ನೀಡುವುದೂ ಆವಶ್ಯಕ. ಬ್ಯಾಂಕೇತರ ಸಂಘ ಸಂಸ್ಥೆಗಳು ಈ ಕಾರ್ಯಭಾರಗಳನ್ನು ವಹಿಸಿಕೊಳ್ಳುವುದು ಉತ್ತಮ. ಹಳ್ಳಿಗಳಲ್ಲೂ ಸಣ್ಣ ಪಟ್ಟಣಗಳಲ್ಲೂ ಅಸ್ತಿತ್ವದಲ್ಲಿ ಇರುವ ಸಂಘ ಸಂಸ್ಥೆಗಳು—ಉದಾಹರಣೆಗೆ ಯುವಕ ಸಂಘಗಳು, ರೋಟರಿ ಕ್ಲಬ್ಬುಗಳು—ಈ ಕಾರ್ಯಭಾರಗಳನ್ನು ಕೈಗೊಳ್ಳಬಹುದು. ಲಾಭದಾಯಕ ಯೋಜನೆಗಳನ್ನು ಮಂಡಿಸುವಂಥ ಕಾರೇಗಾರರನ್ನು ಇವು ಗುರುತಿಸಿ. ಅವರಿಗೆ ಎಲ್ಲ ವಿಷಯಗಳ ಬಗ್ಗೆಯೂ ತಿಳಿವಳಿಕೆ ನೀಡಬೇಕಲ್ಲದೆ, ಸಾಲ ಪಡೆಯುವ ಕಾರ್ಯದಲ್ಲಿ ಅವರಿಗೆ ನೆರವು ನೀಡುವುದು, ಸಾಲದ ಅರ್ಜಿಗಳನ್ನು ಭರ್ತಿ ಮಾಡುವುದು—ಮುಂತಾದುವು. ಇಂಥ ಕಾರ್ಯ ಸಾಲ ರೂಪದಲ್ಲಿ ಪಡೆದ ಹಣದ ದುರುಪಯೋಗವಾಗದಂತೆಯೂ ಇವು ಗಮನ ಇಡಬೇಕು.

ಬ್ಯಾಂಕುಗಳಿಗೆ ಒಂದು ಎಚ್ಚರಿಕೆಯ ಮಾತು. ಸ್ವಯಂ ಪ್ರೇರಿತ ಸಂಘ ಸಂಸ್ಥೆಗಳ ಮೂಲಕ ಕಾರೇಗಾರರು ಮಂಡಿಸುವ ಎಲ್ಲ ಅರ್ಜಿಗಳ ಮೇಲೂ ಯಾಂತ್ರಿಕವಾಗಿ ಹಣವನ್ನು ಮಂಜೂರು ಮಾಡಬೇಕೆಂಬ ಕಡ್ಡಾಯ ಬ್ಯಾಂಕುಗಳಿಗೆ ಇರಕೂಡದು. ಪ್ರತಿಯೊಂದು ಯೋಜನೆಯ ಸಾಧಕಬಾಧಕಗಳನ್ನೂ ಬ್ಯಾಂಕು ಪರಿಶೀಲಿಸಿ, ಅದರ ಸಮರ್ಪಕತೆಯ ಬಗ್ಗೆ ಅವರಿಗೆ ಮನವರಿಕೆಯಾದ ಅನಂತರವೇ ಸಾಲವನ್ನು ಮಂಜೂರು ಮಾಡಬಹುದು. ಈ ವ್ಯವಸ್ಥೆಯ ಅನುಕೂಲಗಳೆಂದರೆ:

1 ನೀಡಿದ ಸಾಲದ ಹಣ ದುರ್ವಿನಿಯೋಗವಾಗದಂತೆ, ಉತ್ಪಾದನ ಕಾರ್ಯದಲ್ಲೇ ಹೂಡಲ್ಪಡುವಂತೆ ನೋಡಿಕೊಳ್ಳುವ ಒಂದು ಸಂಸ್ಥೆಯಿದೆ ಎಂಬ ಭರವಸೆ ಬ್ಯಾಂಕರನಿಗೆ ದೊರಕುತ್ತದೆ.

2 ಬ್ಯಾಂಕು ಯಾವುದೇ ಕುಂಟು ನೆಪ ಒಡ್ಡಿ ತನ್ನ ಅರ್ಜಿಯನ್ನು ತಳ್ಳಿಹಾಕುವುದಿಲ್ಲ ಎಂಬ ಭರವಸೆ ಕಾರೇಗಾರನಿಗೆ ಉಂಟಾಗುತ್ತದೆ.

3 ಸಮಾಜಕ್ಕೆ ಪ್ರತ್ಯೇಕವಾದ ವೆಚ್ಚ ಇರದಂತೆ, ಬ್ಯಾಂಕರ್ ಮತ್ತು ಕಾರೇಗಾರರಲ್ಲಿ ತೃಪ್ತಿ ಉಂಟಾಗುವಂತೆ ಸ್ವಯಂಪ್ರೇರಿತ ಸಂಘ ಸಂಸ್ಥೆಗಳು ಕಾರ್ಯ ನಡೆಸುತ್ತಿವೆ ಎಂಬ ಸಮಾಧಾನ ನಮ್ಮೆಲ್ಲರದಾಗುತ್ತದೆ.

# ಅಗ್ರ ಬ್ಯಾಂಕ್ ಯೋಜನೆ

ವೈ. ವಿಜಯಾನಂದ್

**ದೇಶದ ಸಮಗ್ರ ಅಭಿವೃದ್ಧಿಗಾಗಿ ಕೈಗೊಂಡಿರುವ ಕ್ರಮಗಳ ಪೈಕಿ ಅಗ್ರ ಬ್ಯಾಂಕ್ ಯೋಜನೆ ವಿಶಿಷ್ಟವಾದದ್ದು. ಇದನ್ನು ಕುರಿತ ಪರಿಚಯಾತ್ಮಕ ಲೇಖನವಿದು.**

ಕಳೆದ ಹತ್ತು ವರ್ಷಗಳಲ್ಲಿ ಭಾರತದ ಬ್ಯಾಂಕುಗಳ ರಚನೆ ಹಾಗೂ ವ್ಯವಹಾರಗಳಲ್ಲಿ ಅನೇಕ ಗಮನಾರ್ಹ ಬೆಳವಣಿಗೆಗಳಾಗಿವೆ. ಈ ಬೆಳವಣಿಗೆಗಳಿಂದಾಗಿ ಕೇವಲ ವ್ಯಾಪಾರೀ ಉದ್ದೇಶ ಹೊಂದಿದ್ದ ವಾಣಿಜ್ಯ ಬ್ಯಾಂಕುಗಳು ದೇಶದ ಆರ್ಥಿಕ ಪ್ರಗತಿಯ ಒಂದು ಸಾಧನವಾಗಿ ಮಾರ್ಪಟ್ಟಿವೆ. ಇಂಥ ಬದಲಾವಣೆಗಳ ಪ್ರಾಯೋಗಿಕ ಅನುಭವಗಳಿಂದ ಪ್ರಗತಿಶೀಲ ಧ್ಯೇಯಗಳ ಸಾಧನೆ ನಮ್ಮ ವಾಣಿಜ್ಯ ಬ್ಯಾಂಕುಗಳ ಕ್ರಮಗಳಿಗೆ ಅಸಮಂಜಸವೇನೂ ಅಲ್ಲ ಎಂಬ ಸಂತಸದ ಸತ್ಯ ಸ್ಪಷ್ಟವಾಗಿದೆ. ಮೇಲಾಗಿ ಆರ್ಥಿಕವಾಗಿ ಆದ್ಯತೆ ನೀಡಬೇಕಾದ ವಲಯಗಳಿಗೆ ಉತ್ತೇಜನ ಹಾಗೂ ಅವುಗಳ ಬೆಳವಣಿಗೆಯ ಹೊಣೆಗಾರಿಕೆಯನ್ನು ವಾಣಿಜ್ಯ ಬ್ಯಾಂಕುಗಳಿಗೆ ವಹಿಸಿಕೊಡುವ ಮೂಲಕ ಅವಕ್ಕೆ ಒಂದು ಉದ್ದೇಶ ಮತ್ತು ಆದೇಶವನ್ನು ನಿರೂಪಿಸಿದಂತಾಗಿದೆ. ಬ್ಯಾಂಕುಗಳ ಸಾಮೂಹಿಕ ಯತ್ನವಾದ ಇದನ್ನು ಅಗ್ರ ಬ್ಯಾಂಕ್ ಯೋಜನೆಯೆಂಬ (ಲೀಡ್ ಬ್ಯಾಂಕ್ ಸ್ಕೀಮ್) ಹೆಸರಿನಲ್ಲಿ ದೇಶಾದ್ಯಂತ ಜಾರಿಗೆ ತರಲಾಗಿದೆ.

ಅರವತ್ತರ ದಶಕದ ಉತ್ತರಾರ್ಧದಲ್ಲಿ ರಾಷ್ಟ್ರೀಯ ಉದರಿ ಮಂಡಲಿಯ ಅಧ್ಯಯನ ತಂಡ ವಾಣಿಜ್ಯ ಬ್ಯಾಂಕುಗಳಲ್ಲಿ ತೋರಿದ ಎರಡು ಆಂತರಿಕಕಾರಿ ಲಕ್ಷಣಗಳನ್ನು ಎತ್ತಿ ತೋರಿಸಿತು. ಅಗ್ರ ಬ್ಯಾಂಕ್ ಯೋಜನೆಯ ಪರಿಕಲ್ಪನೆ ಇದರ ಫಲ. ಆ ಲಕ್ಷಣಗಳೆಂದರೆ:

1 ಗ್ರಾಮಾಂತರ ಪ್ರದೇಶಗಳಲ್ಲಿ, ಅದರಲ್ಲೂ ಹಿಂದುಳಿದ ಪ್ರದೇಶಗಳಲ್ಲಿ, ಶಾಖೆಗಳನ್ನು ಸ್ಥಾಪಿಸಿ ಬೆಳೆಸಲು ವಾಣಿಜ್ಯ ಬ್ಯಾಂಕುಗಳು ಹಿಂಜರಿಯುತ್ತಿರುವುದು.

2 ಹಿಂದುಳಿದ, ಆದರೆ ಆದ್ಯತೆಯ ವಲಯಗಳಿಗೆ, ಅದರಲ್ಲೂ ವ್ಯವಸಾಯ ವಲಯಕ್ಕೆ ಉದರಿ ಸೌಲಭ್ಯಗಳನ್ನು ನೀಡಲು ವಾಣಿಜ್ಯ ಬ್ಯಾಂಕುಗಳಿಗಿರುವ ಶಂಕೆ, ಸಂಶಯಗಳು.

ಇವಕ್ಕೆ ಅಧ್ಯಯನ ತಂಡ ಸೂಚಿಸಿದ ಪರಿಹಾರ ಕ್ರಮವೆಂದರೆ: 'ಪ್ರಾದೇಶಿಕ ಪರಿದೃಷ್ಟಿ' (ಏರಿಯಾ ಅಪ್ರೋಚ್) ಇದರ ಪ್ರಕಾರ ದೇಶದ ಎಲ್ಲ ದೊಡ್ಡ ಬ್ಯಾಂಕುಗಳೂ ತಮ್ಮ ಹೊಣೆಯ ಜಿಲ್ಲೆಗಳಲ್ಲಿ ಬ್ಯಾಂಕು ಶಾಖೆಗಳನ್ನು ಸಾಕಷ್ಟು ಸಂಖ್ಯೆಯಲ್ಲಿ ಸ್ಥಾಪಿಸುವುದು; ಹಾಗೂ ಅಗತ್ಯವಾದಷ್ಟು ಸಾಲ-ಸೌಲಭ್ಯವನ್ನು ದೊರಕಿಸಿಕೊಟ್ಟು, ಆ ಮೂಲಕ ಆ ಜಿಲ್ಲೆಯ ಅಭಿವೃದ್ಧಿಯನ್ನು ಸಾಧಿಸುವುದು.

ಈ ಸೂಚನೆಯನ್ನು ಬ್ಯಾಂಕರರ ಸಮಿತಿ ಒಪ್ಪಿಕೊಂಡಿತು. ಭಾರತೀಯ ರಿಸರ್ವ್ ಬ್ಯಾಂಕು 1969ರಲ್ಲಿ ಇದನ್ನು ಕಾರ್ಯರೂಪಕ್ಕೆ ತಂದಿತು. ಮಹಾ ನಗರಗಳ ವಿನಾ ದೇಶದ ಒಂದೊಂದು ಜಿಲ್ಲೆಗೂ ಒಂದೊಂದು ಬ್ಯಾಂಕನ್ನು 'ಅಗ್ರ ಬ್ಯಾಂಕು' ಎಂದು ನಿರ್ದೇಶಿಸಲಾಯಿತು. ದೇಶದ ಅತ್ಯಂತ ದೊಡ್ಡ ಬ್ಯಾಂಕು ಎಂಬ ಕಾರಣದಿಂದಾಗಿ ಭಾರತೀಯ ಸ್ಟೇಟ್ ಬ್ಯಾಂಕಿಗೆ ಅತ್ಯಂತ ಹೆಚ್ಚು ಸಂಖ್ಯೆಯ ಜಿಲ್ಲೆಗಳಲ್ಲಿ, ಅದರಲ್ಲೂ ಹಿಂದುಳಿದ ಹಾಗೂ ಹಿಂದೆ ಬ್ಯಾಂಕಿಂಗ್ ಅಧೋರಚನೆಯೇ ಇಲ್ಲದಿದ್ದ ಈಶಾನ್ಯ ಭಾರತದ ಜಿಲ್ಲೆಗಳ ಹೊಣೆಯನ್ನು ವಹಿಸಲಾಯಿತು. ಸ್ಟೇಟ್ ಬ್ಯಾಂಕಿನ 'ಸಹ ಬ್ಯಾಂಕು' ಗಳಿಗೂ ಎಲ್ಲ ರಾಷ್ಟ್ರೀಕೃತ ಬ್ಯಾಂಕುಗಳಿಗೂ ಖಾಸಗಿ ವಲಯದ ಮೂರು ದೊಡ್ಡ ಬ್ಯಾಂಕುಗಳಿಗೂ ವಿವಿಧ ಜಿಲ್ಲೆಗಳ 'ಅಗ್ರಬ್ಯಾಂಕಿಂಗ್' ಹೊಣೆಗಾರಿಕೆ ವಹಿಸಲಾಯಿತು.

ಈ ಯೋಜನೆಯನ್ನು ರಿಸರ್ವ್ ಬ್ಯಾಂಕಿನ ಸೂಚನೆಯ ಪ್ರಕಾರ ಹಂತಹಂತಗಳಲ್ಲಿ ಪ್ರಾರಂಭಿಸಲಾಯಿತು. ಅಗ್ರ ಬ್ಯಾಂಕುಗಳು ಆಯಾ ಜಿಲ್ಲೆಗಳ ಸಾಲ ಸೌಲಭ್ಯಗಳ ಆಗತ್ಯದ ಸರ್ವೇಕ್ಷಣೆಗಳನ್ನು ನಡೆಸಿದವು. ಇದರ ಜೊತೆಯಲ್ಲಿಯೇ ಬ್ಯಾಂಕು ಶಾಖೆಗಳನ್ನು ಸ್ಥಾಪಿಸಲು ಇರುವ ಅನುಕೂಲತೆ ಹಾಗೂ ಸಾಮರ್ಥ್ಯ, ಠೇವಣಿಗಳು, ಸರ್ಕಾರಗಳಿಂದ ಲಭಿಸ

ಬಹುದಾದ ಸಹಾಯ ಧನಗಳು, (Subsidies) ಉತ್ತೇಜಕ ಧನಗಳು (Incentives), ಹಾಗೂ ದೀರ್ಘಾವಧಿ ಸಾಲ ಸಂಸ್ಥೆಗಳಿಂದ ದೊರಕಬಹುದಾದ ಮರುಸಾಲಗಳ (Refinance) ಅಂದಾಜುಗಳನ್ನೂ ತಯಾರಿಸಲಾಯಿತು. ಸರ್ಕಾರಿ ಪಾರುಪತ್ಯಗಳಿಂದ ದೊರಕಬೇಕಾಗುವ ಸಹಾಯ-ಸಂರಕ್ಷಣೆಗಳು, ಈಗಿರುವ ಅಧೋರಚನಾತ್ಮಕ ಸೌಲಭ್ಯಗಳು, ಹಾಗೂ ಸರ್ಕಾರ ರೂಪಿಸಿಕೊಂಡಿರುವ ಬೆಳವಣಿಗೆಯ ಕಾರ್ಯಕ್ರಮಗಳು, ಇತ್ಯಾದಿಗಳನ್ನು ಪೃಥಕ್ಕರಣ ಮಾಡಲಾಯಿತು. ಇವೆಲ್ಲವನ್ನೂ ಒಂದು ಪತ್ರದಲ್ಲಿ ಕ್ರೋಢೀಕರಿಸಿ ಸಂಯೋಜಿಸಲಾಯಿತು. ಇಂಥ ಪತ್ರವನ್ನು ಆ ಜಿಲ್ಲೆಯ 'ಉದರಿ ಯೋಜನೆ' (Credit plan) ಎಂದು ಕರೆಯಲಾಯಿತು.

ಇದರೊಡನೆಯೇ ಪ್ರತಿಯೊಂದು ಜಿಲ್ಲೆಯಲ್ಲಿಯೂ 'ಜಿಲ್ಲಾ ಸಲಹಾ ಸಮಿತಿ' ಗಳನ್ನೂ ರಚಿಸಲಾಯಿತು. ಈ ಸಮಿತಿಯ ಅಧ್ಯಕ್ಷರು ಜಿಲ್ಲಾಧಿಕಾರಿಗಳು. (Deputy Commissioner), ರಿಸರ್ವ್ ಬ್ಯಾಂಕು, ಆ ಜಿಲ್ಲೆಯಲ್ಲಿನ ಎಲ್ಲ ವಾಣಿಜ್ಯ ಹಾಗೂ ಸಹಕಾರ ಬ್ಯಾಂಕುಗಳು, ಸರ್ಕಾರೀ ಇಲಾಖೆಗಳು, ಬೆಳವಣಿಗೆ ಸಂಸ್ಥೆಗಳು ಈ ಸಮಿತಿಯ ಸದಸ್ಯತ್ವ ಪಡೆದಿರುತ್ತವೆ. ಅಗ್ರ ಬ್ಯಾಂಕು ಈ ಸಭೆಯ ಸಂಚಾಲಕತ್ವ ವಹಿಸುತ್ತದೆ. ಆಯಾ ಜಿಲ್ಲೆಯ ಉದರಿ ಯೋಜನೆಯನ್ನು ವ್ಯವಸ್ಥಾಪಿಸುವ ಹಾಗೂ ಕಾರ್ಯಗತಗೊಳಿಸುವ ಜವಾಬ್ದಾರಿ ಈ 'ಜಿಲ್ಲಾ ಸಲಹಾ ಸಮಿತಿ' ಗಳದು. ಅಗ್ರ ಬ್ಯಾಂಕು 'ಸಮಾನರಲ್ಲಿ ಅಗ್ರಗಣ್ಯ' ಎಂಬ ಅಂಶವನ್ನು ಸ್ಪಷ್ಟವಾಗಿ ಪ್ರತಿಪಾದಿಸುತ್ತದೆ. ಆದರೆ, ಈ ಸಾಲದ ಯೋಜನೆಯಲ್ಲಿ ಹೇಳಿರುವ ಎಲ್ಲ ಧ್ಯೇಯೋದ್ದೇಶಗಳನ್ನೂ ಅದರಲ್ಲಿ ತಿಳಿಸಿರುವಂತೆ ನೆರವೇರಿಸುವ ಜವಾಬ್ದಾರಿ ಎಲ್ಲ ಆರ್ಥಿಕ ಸಂಸ್ಥೆಗಳು ಹಾಗೂ ಬೆಳವಣಿಗೆ ಸಂಸ್ಥೆಗಳದಾಗಿರುತ್ತದೆ. ಈ ಸಲಹಾ ಸಮಿತಿ ಮೂರು ತಿಂಗಳಿಗೊಮ್ಮೆ ಸೇರಿ ಉದರಿ ಯೋಜನೆಯನ್ನು ಕಾರ್ಯಗತಗೊಳಿಸುವುದಕ್ಕೆ ಸಂಬಂಧಿಸಿದ ಎಲ್ಲ ವಿಷಯಗಳನ್ನೂ ಚರ್ಚಿಸುತ್ತದೆ. ದೀರ್ಘ ಅಧ್ಯಯನ ಮಾಡಬೇಕಾಗುವಂತಹ ವಿಷಯಗಳನ್ನು ಒಂದು 'ಉಪಸಮಿತಿ' ನಿರ್ವಹಿಸುತ್ತದೆ.

ಜಿಲ್ಲಾ ಸಲಹಾ ಸಮಿತಿಯ ಒಂದು ವಿಶೇಷ ಸಭೆಯಲ್ಲಿ ಉದರಿ ಯೋಜನೆಯ ಪ್ರತಿಯೊಂದು ಸದಸ್ಯ ಸಂಸ್ಥೆಯ ಪಾಲಿನ ಹೊಣೆಗಾರಿಕೆಯನ್ನು ತೀರ್ಮಾನಿಸಲಾಗುವುದು. ಈ ವಿಶೇಷ ಸಭೆಯಲ್ಲಿ ಪ್ರತಿಯೊಂದು ಸದಸ್ಯ ಸಂಸ್ಥೆಯ ಒಬ್ಬರು ಅಥವಾ ಹೆಚ್ಚು ಜ್ಯೇಷ್ಠ ಅಧಿಕಾರಿಗಳು ಭಾಗವಹಿಸಿ ತಮ್ಮ ಸಂಸ್ಥೆಯ ಪಾಲನ್ನು ಒಪ್ಪಿಕೊಳ್ಳುತ್ತಾರೆ.

ಈ ಭಾಗವಹಿಸುವ ಸಂಸ್ಥೆಗಳ ನಿರ್ವಹಣೆಯನ್ನು ಜಿಲ್ಲಾ ಸಲಹಾ ಸಮಿತಿ ತಪಾಸಣೆ ಮಾಡುತ್ತದೆ. 'ಪ್ರಗತಿ ವರದಿ' ಗಳನ್ನು ನಿಯಮಿತವಾಗಿ ಭಾರತ ಸರ್ಕಾರಕ್ಕೂ ರಿಸರ್ವ್ ಬ್ಯಾಂಕಿಗೂ ಕಳುಹಿಸಲಾಗುವುದು. ಈ ವರದಿಗಳನ್ನು ಅವರು ಪರಿಶೀಲಿಸಿ, ಎಚ್ಚರಿಕೆ ನೀಡಿ, ಬೇಕಾದಲ್ಲಿ ಪರಿಹಾರ ಕ್ರಮಗಳನ್ನು ಆದೇಶಿಸುತ್ತಾರೆ. ಅಗ್ರ ಬ್ಯಾಂಕುಗಳೂ ಕೆಲವು ಬಾರಿ ತಮ್ಮ ಸಾಮೂಹಿಕ ಸಾಧನೆಗೆ ಹೆಚ್ಚು ಸಾಮರ್ಥ್ಯ ಕಸುವುಗಳನ್ನು ಸಜ್ಜುಗೊಳಿಸಿಕೊಳ್ಳಲು ವಿಶೇಷ ಸಭೆಗಳನ್ನು ಏರ್ಪಡಿಸುತ್ತವೆ.

ಆರ್ಥಿಕ ಪ್ರಗತಿ ಒಂದು ನಿರಂತರ ಕ್ರಿಯೆಯಾದ್ದರಿಂದ 'ಉದರಿ ಯೋಜನೆ' ಯೂ ಸಂತತ, ನಿರಂತರ. ಅಗ್ರ ಬ್ಯಾಂಕು ಆ ಯೋಜನೆಯ ಮೊಟ್ಟಮೊದಲನೆಯ ಉದರಿ ಯೋಜನೆಗಳು ಐದನೆಯ ಪಂಚವಾರ್ಷಿಕ ಯೋಜನೆಯ ಜೊತೆಗೆ ಏಕಕಾಲದಲ್ಲಿ ಸಂಭವಿಸುವ ಹಾಗೆ ಮಾಡಬೇಕೆಂಬ ಒಂದು ಅಭಿಪ್ರಾಯವಿತ್ತು. ಆದರೆ ಈ ಉದರಿ ಯೋಜನೆಗಳ ಪ್ರಯೋಗ ಅದೇ ಮೊದಲನೆಯ ಬಾರಿಯಾದ್ದರಿಂದ ಅನೇಕ ಜಿಲ್ಲೆಗಳಲ್ಲಿ ಈ ಯೋಜನೆಗಳನ್ನು ಸಾಕಷ್ಟು ವಿಳಂಬವಾಗಿಯೇ ಸಿದ್ಧಪಡಿಸಲಾಯಿತು. ಆದ್ದರಿಂದ ಈ ಯೋಜನೆಗಳನ್ನು 1977 ಮತ್ತು 1978ರಲ್ಲಿ ಮಾತ್ರ, ಎಂದರೆ, ಐದನೆಯ ಪಂಚವಾರ್ಷಿಕ ಯೋಜನೆ ಮುಗಿಯುವುದಕ್ಕೆ (ಮಾರ್ಚ್ 1979) ಸ್ವಲ್ಪ ಮುಂಚೆ ಜಾರಿಗೆ ತರಲು ಸಾಧ್ಯವಾಯಿತು. ಆದರೆ ಇದಕ್ಕೆ ಕಾರಣ, ಇದರಲ್ಲಿ ಭಾಗ ವಹಿಸಲಿದ್ದ ಬ್ಯಾಂಕುಗಳು ಸಾಕಷ್ಟು ಪ್ರಯತ್ನ ಮಾಡಲಿಲ್ಲ ಎಂದಲ್ಲ. ಏನೇ ಇರಲಿ, ಉದರಿ ಯೋಜನೆಯಲ್ಲಿ ನಮೂದಿಸಿದ್ದ ವಿಧಾನಗಳಂತೂ ಯಾವುದೇ ಪ್ರಗತಿಪರ ಧೋರಣೆಯ ಬ್ಯಾಂಕು ಉದರಿ ನೀಡಬಹುದಾದಂತಹ ಪರಿಷ್ಕೃತ ವಿಧಾನಗಳು ಮಾತ್ರ. ಆದರೆ ಪ್ರಯೋಗದಲ್ಲಿ ಅನೇಕ ತೊಡಕುಗಳು ಉದ್ಭವಿಸಿದ್ದರಿಂದ 'ಸಾಲದ ಯೋಜನೆ' ಯಲ್ಲಿ ಸೂಚಿಸಲಾದ ವಿಧಾನಕ್ಕೆ ಭಿನ್ನವಾದ ಬೆಳವಣಿಗೆಗಳಾದುವು.

ಬ್ಯಾಂಕುಗಳು ಎದುರಿಸಬೇಕಾದ ಮತ್ತೊಂದು ಸಮಸ್ಯೆಯೆಂದರೆ ಏಪ್ರಿಲ್‌ನಿಂದ ಮಾರ್ಚ್ ವರೆಗಿನ ನಿಯಮಿತ ಉದರಿ ಯೋಜನೆಗಳನ್ನು ಜನವರಿಯಿಂದ ಡಿಸೆಂಬರ್ ವರೆಗಿನ ವರ್ಷದ ಬ್ಯಾಂಕುಗಳ ವಾರ್ಷಿಕ ಯೋಜನೆಗಳಲ್ಲಿ ಹೊಂದಿಸಲು ಸಾಧ್ಯವಾಗದಿದ್ದು, ಇದನ್ನು ಬಗೆಹರಿಸಲು ಮೊದಲನೆಯ ವೃತ್ತದ ಸಾಲದ ಯೋಜನೆಗಳನ್ನು ಡಿಸೆಂಬರ್ 1979ರ ವರೆಗೆ ವಿಸ್ತರಿಸಲಾಯಿತು. ಈ ಅವಧಿಯಲ್ಲಿ ಕೆಲವು ಬ್ಯಾಂಕುಗಳು ತಮ್ಮ ತಮ್ಮ ಜಿಲ್ಲೆಗಳಲ್ಲಿ ವಿಶೇಷ ಅಧ್ಯಯನಗಳನ್ನು ನಡೆಸಿ, ಎಲ್ಲಿ ಪ್ರಗತಿ ಕುಂಠಿತವಾಗಿತ್ತೋ ಅಲ್ಲಿ ಸುಧಾರಣಾ ಕ್ರಮಗಳನ್ನು ಸೂಚಿಸಿದುವು.

1980ರ ಜನವರಿಯಿಂದ 1982ರ ಡಿಸೆಂಬರ್ ವರೆಗಿನ ಅವಧಿಗೆ ರಚಿಸಬೇಕಾದ ಎರಡನೆಯ ಉದರಿ ಯೋಜನೆಗಳಿಗೆ

ರಿಸರ್ವ್ ಬ್ಯಾಂಕು ಹೊಸ ಆದೇಶಗಳನ್ನು ನೀಡಿತು. ಇದರ ಮುಖ್ಯ ಉದ್ದೇಶಗಳೆಂದರೆ:

1 ಮೊದಲನೆಯ ಉದರಿ ಯೋಜನೆಯ ರಚನೆಯಲ್ಲಿ ಕಂಡ ಲೋಪದೋಷಗಳನ್ನು ನಿವಾರಿಸುವುದು.

2 ನೇರ, ವಿಕೇಂದ್ರೀಕೃತ ಹಾಗೂ ಪ್ರಬಲ ವಿಧಾನವನ್ನು ರೂಪಿಸುವುದು.

ಈ ಎರಡನೆಯ ಉದರಿ ಯೋಜನೆಯ ಕೆಲವು ವೈಶಿಷ್ಟ್ಯಗಳಿವು:

1 ಉದರಿ ಯೋಜನೆಯ ಗುರಿಗಳನ್ನು ಜಿಲ್ಲೆಯಲ್ಲಿನ ಪ್ರತಿಯೊಂದು ಭಾಗಕ್ಕೂ ಪ್ರತಿ ಯೋಜನೆಯ ಪ್ರಕಾರ ವಿಂಗಡಿಸಿ ಹಂಚುವಿಕೆ;

2 ಉದರಿಯ ಅಂದಾಜನ್ನು ಭಾಗವಹಿಸುವ ಬ್ಯಾಂಕುಗಳು ಯೋಜಿಸಿಕೊಂಡಿರುವ ಉದರಿ ನೀಡಿಕೆ ಕಾರ್ಯಕ್ರಮಗಳಿಗನುಗುಣವಾಗಿ ರಚಿಸುವುದು.

3 ಈ ಉದರಿ ಯೋಜನೆಯನ್ನು ವಾರ್ಷಿಕ ಗುರಿಗಳಿಗೆ ಅನುಗುಣವಾಗಿ, 'ವಾರ್ಷಿಕ ಕ್ರಿಯಾ ಯೋಜನೆ' ಎಂದು ವಿಂಗಡಿಸಿ ಹಂಚುವುದು.

4 ಆಯಾ ಜಿಲ್ಲೆಯಲ್ಲಿನ ಸರ್ಕಾರೀ ಇಲಾಖೆಗಳ ಹಾಗೂ ಬೆಳವಣಿಗೆ ಸಂಸ್ಥೆಗಳ ಹೊಣೆಗಾರಿಕೆಗಳನ್ನು ಖಚಿತಗೊಳಿಸುವುದು.

5 ಪ್ರತಿಯೊಂದು ಕ್ಷೇತ್ರದಲ್ಲೂ ಸಾಧಿಸಿರುವ ಪ್ರಗತಿಯನ್ನು ಸೂಕ್ಷ್ಮವಾಗಿ ಪರಿಶೀಲಿಸಬಲ್ಲ ಹಾಗೂ ಅಸಾಧ್ಯವೆನಿಸುವ ವಿಧಾನಗಳನ್ನೂ ರಚನೆಗಳನ್ನೂ ನಿಲ್ಲಿಸಬಹುದಾದ ಹಾಗೂ ವಾಣಿಜ್ಯ ಬ್ಯಾಂಕುಗಳು ಕಾರ್ಯರೂಪಕ್ಕೆ ತರಬಹುದಾದ ನವೀನ ರೀತಿಯ ವಿಧಾನಗಳನ್ನು ತಯಾರು ಮಾಡಬಹುದಾದ ಒಂದು ಪ್ರಬಲ ಪರಿಶೀಲನಾ ಕೌಶಲದ ರಚನೆಯನ್ನು ರೂಪಿಸುವುದು.

6 ಜಿಲ್ಲೆಯಲ್ಲಿನ ಎಲ್ಲ ಸಾಲಗಳ ಆವಶ್ಯಕತೆಯ ಅಂದಾಜು ಮಾಡುವಿಕೆ ಹಾಗೂ ಸಾಲದ ಯೋಜನೆಯ ಪ್ರಗತಿ ಪರಿಶೀಲನೆಗಳಿಗೆ ಸಮಾನ ಪದ್ಧತಿಗಳ ಪರಿವಿಡಿಯನ್ನು ರೂಪಿಸುವುದು. ಇದಂತೂ ಮೊದಲನೆಯ ಉದರಿ ಯೋಜನೆಯಲ್ಲಿ ಗಣನೀಯವಾಗಿ ಗೊಂದಲಕ್ಕೀಡಾಗಿದ್ದ ವಿಷಯ.

ಮೊದಲನೆಯ ಉದರಿ ಯೋಜನೆಯ ಒಂದು ಪರಿಶೀಲನೆಯ ಪ್ರಕಾರ ಕರ್ನಾಟಕದಲ್ಲಿ ಮೂಲ ಅಗತ್ಯಗಳಿಗಿರುವ ತೊಡಕುಗಳನ್ನು ಗಮನದಲ್ಲಿಟ್ಟುಕೊಂಡು ನೋಡಿದಾಗ ಬ್ಯಾಂಕುಗಳು ಈ ಸಾಲದ ಯೋಜನೆಗಳನ್ನು ಯಶಸ್ವಿಯಾಗಿ ಕಾರ್ಯಗತಗೊಳಿಸಿವೆ.

ಈ ಯೋಜನೆಯ ಕೆಲವು ಸುಸ್ಪಷ್ಟ ಉಪಯುಕ್ತತೆಗಳು ಈ ಮುಂದಿನಂತಿವೆ:

1 ದುರ್ಬಲ ಹಾಗೂ ಆದ್ಯತಾ ಕ್ಷೇತ್ರಗಳಿಗೆ ನೀಡುತ್ತಿರುವ ಸಾಲದ ಗಾತ್ರವನ್ನು ಬ್ಯಾಂಕುಗಳ ಒಟ್ಟು ಸಾಲಗಳ ಗಾತ್ರಕ್ಕೆ ಹೋಲಿಸಿದಾಗ ಪ್ರಶಸ್ತವಾಗಿ ಬೆಳೆದಿದೆ; ಬೆಳೆಯುತ್ತಿದೆ.

2 ಇದುವರೆಗೂ ಬ್ಯಾಂಕು ಶಾಖೆಗಳು ಇರದಿದ್ದ ಗ್ರಾಮಾಂತರ ಪ್ರದೇಶಗಳಲ್ಲಿ ಶಾಖೆಗಳ ಸ್ಥಾಪನೆ.

3 ಮಾರ್ಗದರ್ಶಿ ಬ್ಯಾಂಕಿನ ಸಕಲ ಸಹಾಯಗಳಿಂದ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಸ್ಥಾಪನೆ.

4 ಅಗ್ರಬ್ಯಾಂಕುಗಳು ಪ್ರಾರಂಭಿಸಿರುವ 'ಉದ್ಯಮಶೀಲತಾಭಿವೃದ್ಧಿ ಕಾರ್ಯಕ್ರಮ' ಮುಂತಾದ ವಿಶೇಷ ಕಾರ್ಯಕ್ರಮಗಳು.

5 ಬ್ಯಾಂಕುಗಳ ಜೊತೆಗೆ ಅನೇಕ ವಿಶಿಷ್ಟ ಸಂಸ್ಥೆಗಳು ನಿಯೋಜಿಸಿರುವ ಪ್ರೋತ್ಸಾಹದಾಯಕ ಯೋಜನೆಗಳು.

6 ಜಿಲ್ಲಾ ಆಡಳಿತ ವರ್ಗದವರು ಅಲ್ಲಿಯ ಸಾಲದ ಪೂರೈಕೆಯ ಹೊಣೆಗಾರಿಕೆಯಲ್ಲಿ ವಹಿಸುತ್ತಿರುವ ಸಕ್ರಿಯ ಪಾತ್ರ.

7 ಅಗ್ರ ಬ್ಯಾಂಕಿನ ಅಧಿಕಾರಿಯನ್ನು ಆ ಜಿಲ್ಲೆಯಲ್ಲಿಯ ಎಲ್ಲ ಬ್ಯಾಂಕುಗಳ ಪ್ರತಿನಿಧಿಯೆಂದೂ, ಸರ್ಕಾರದೊಡನೆ ಸಂಪರ್ಕ ಸಾಧಕ ಅಧಿಕಾರಿಯೆಂದೂ ಅಂಗೀಕರಿಸಿರುವುದು.

ಅಗ್ರ ಬ್ಯಾಂಕ್ ಯೋಜನೆಯ ಆಕರ್ಷಣೆಯನ್ನು ಉತ್ಪ್ರೇಕ್ಷೆ ಮಾಡಲು ಸಾಧ್ಯವಿಲ್ಲ. ಠೇವಣಿಗಳಿಗಾಗಿ ಪರಸ್ಪರ ಸ್ಪರ್ಧೆಯಲ್ಲಿ ತೊಡಗುತ್ತಿದ್ದ ಬ್ಯಾಂಕುಗಳು ಪರಸ್ಪರ ಕೂಡಿ, ಸಾಮಾನ್ಯ ರೈತಾಪಿ ಜನರಿಗೆ, ಕರಕುಶಲಕರ್ಮಿಗಳಿಗೆ ಸಹಾಯ ಮಾಡುವ ಯೋಜನೆಗಳಿಗಾಗಿ ಅನ್ಯೋನ್ಯತೆಯಿಂದ ಚರ್ಚಿಸುವುದನ್ನು ನೋಡುವುದು ಉಲ್ಲಾಸಕರ. ಅಗ್ರ ಬ್ಯಾಂಕಿನವರು ಕೆಲವು ಸಾಲ ಯೋಜನೆಗಳ ವಿಷಯವಾಗಿ ರಜೆದಿನಗಳಲ್ಲಿ ಸಭೆ ಕರೆದಾಗ ಒಡನಾಡಿ ಬ್ಯಾಂಕುಗಳವರೆಲ್ಲ ಮನಃಪೂರ್ವಕವಾಗಿ ಆ ಕರೆಯನ್ನು ಗೌರವಿಸಿ ಹೋಗುವುದು ನಿಜವಾಗಿಯೂ ಆನಂದದಾಯಕ. ಅಗ್ರೇತರ ಬ್ಯಾಂಕ್ ಅಧಿಕಾರಿಗಳು ಬೇರೆ ರಾಜ್ಯಗಳಲ್ಲಿ, ಬೇರೆ ಜಿಲ್ಲೆಗಳಲ್ಲಿ ತಮ್ಮ ಬ್ಯಾಂಕುಗಳು ಕೆಲವು ಸಮಸ್ಯೆಗಳನ್ನು ಹೇಗೆ ಪರಿಹರಿಸುವುವೆಂಬ ಉದಾಹರಣೆಗಳನ್ನು ಜಿಲ್ಲಾ ಸಲಹಾ ಸಮಿತಿಗೆ ತಿಳಿಸುವುದನ್ನು ನೋಡಲು ನಿಜಕ್ಕೂ ಆಹ್ಲಾದಕರ. ಮೇಲಾಗಿ ಬ್ಯಾಂಕುಗಳು, ಸರ್ಕಾರಿ ಅಧಿಕಾರಿಗಳು, ಜಿಲ್ಲಾ ಸಲಹಾ ಸಮಿತಿಯ ವತಿಯಲ್ಲಿ ಒಟ್ಟಿಗೆ ಸೇರಿ ಕೈಗೊಳ್ಳುವ ಸಾಂಘಿಕ ಹೊಣೆಗಾರಿಕೆ ನಿಜಕ್ಕೂ ಅಪೂರ್ವ.

ಒಂದು ಉದರಿ ಯೋಜನೆ ಆ ಜಿಲ್ಲೆಯ ಜನತೆಗೆ ಹಾಗೂ ಬ್ಯಾಂಕುಗಳಿಗೆ ನಿರ್ಮಿಸಿರುವ ಒಂದು ಕಟ್ಟುಪಾಡು, ಒಂದು ಸಂಬಂಧ. ಬ್ಯಾಂಕುಗಳ ಉತ್ತಮ ಪರಿಶ್ರಮದಿಂದ ಜನತೆಯ ಜೀವನ ರೂಪುಗೊಳ್ಳಬಹುದು; ಹಾಗೂ ಸಫಲತೆ ಅಭಿವೃದ್ಧಿಗಳಿಗೆ ನೆರವಾಗಬಹುದು—ಎಂಬ ಅರಿವು ಬ್ಯಾಂಕಿನವರ ಕಾರ್ಯತತ್ಪರತೆಯನ್ನು ಚೇತನಗೊಳಿಸಬೇಕು.

# ವಿಶ್ವ ಬ್ಯಾಂಕಿಗೆ ಎಂಬತ್ತರ ದಶಕದ ಸವಾಲುಗಳು, ಅವುಗಳ ನಿವಾರಣೆ

ಅನುವಾದ : ಪಾ. ರಾಜಗೋಪಾಲ

## ವಿಶ್ವ ಬ್ಯಾಂಕಿನ ಅಧ್ಯಕ್ಷ ರಾಬರ್ಟ್ ಮೆಕ್‌ನಮಾರಾ ಅವರ ಭಾಷಣವೊಂದರ ಕನ್ನಡ ರೂಪ

ವಿಶ್ವ ಬ್ಯಾಂಕು ಅತ್ಯಂತ ದೊಡ್ಡ ಆರ್ಥಿಕ ಸಂಸ್ಥೆ. ಅದು ಆರ್ಥಿಕ ಕಾರ್ಯಭಾರದಿಂದ ಕೂಡಿದ ಆರ್ಥಿಕ ಮಧ್ಯವರ್ತಿಯಾಗಿದೆ. ಅಭಿವೃದ್ಧಿ ಹೊಂದುತ್ತಿರುವ ಜಗತ್ತಿನಲ್ಲಿ ಪರ್ಯಾಯ ನೀತಿಗಳಿಗೆ ವಿಶೇಷ ಗಮನವನ್ನಿತ್ತು, ಆರ್ಥಿಕ ಮತ್ತು ಸಾಮಾಜಿಕ ಪ್ರಗತಿಯನ್ನು ತ್ವರಿತಗೊಳಿಸುವಲ್ಲಿ ಅದು ಮಹತ್ವದ ಪಾತ್ರ ವಹಿಸುತ್ತಿದೆ. ಅದು ಅಭಿವೃದ್ಧಿಯ ಅಭಿಕರಣವಾಗಿದೆ, ಸಾಧನವಾಗಿದೆ. ವಿಶ್ವದ ಆರ್ಥಿಕತೆ ಛಿದ್ರಛಿದ್ರವಾಗಿ, ದಾರುಣ ಪರಿಸ್ಥಿತಿಯಲ್ಲಿದ್ದಾಗ 1944ರಲ್ಲಿ ವಿಶ್ವ ಬ್ಯಾಂಕು ಅಸ್ತಿತ್ವಕ್ಕೆ ಬಂದಿತು. ಅಂತರ ರಾಷ್ಟ್ರೀಯ ಸಹಕಾರದಂಥ ಸೃಷ್ಟಿಕಾರಕ ತತ್ತ್ವದಲ್ಲಿ ಗಾಢ ನಂಬಿಕೆಯನ್ನು ಇದರ ಹುಟ್ಟಿನಲ್ಲಿ ಕಾಣಬಹುದು. ಈಗ ಎರಡು ಅಭಿವೃದ್ಧಿ ದಶಕಗಳನ್ನು ಮುಗಿಸಿರುವ ವಿಶ್ವ ಬ್ಯಾಂಕು ಮೂರನೆಯ ಅಭಿವೃದ್ಧಿ ದಶಕಕ್ಕೆ ಕಾಲಿರಿಸುತ್ತಿದೆ.

### ಎಂಬತ್ತರ ದಶಕದ ಸವಾಲುಗಳ ಸ್ವರೂಪ

ಎಂಬತ್ತರ ದಶಕದ ಸಮಸ್ಯೆಗಳು ಹಿಂದಿನ ದಶಕಗಳ ಸಮಸ್ಯೆಗಳಿಗಿಂತ ಜಟಿಲವಾಗಿರುತ್ತವೆ. ನಲವತ್ತರ ದಶಕದ ಮಧ್ಯದಲ್ಲಿದ್ದದ್ದಕ್ಕಿಂತ ಎಂಬತ್ತರ ದಶಕದಲ್ಲಿ ಸಮಸ್ಯೆಗಳು ಕಷ್ಟತರವಾಗಿರುತ್ತವೆ. ಈ ದಶಕದ ಸವಾಲುಗಳಿಗೆ ಅತ್ಯಂತ ಸೂಕ್ತವಾದ ಮತ್ತು ಪ್ರಾಯೋಗಿಕವಾದ ಪರಿಹಾರಗಳನ್ನು ಹಿಂದಿನ ದಶಕಗಳ ಅನುಭವದ ಮೇಲೆ ರೂಪಿಸಿಕೊಳ್ಳಬೇಕಾಗಿದೆ. ಹಿಂದಿನ ದಶಕಗಳ ಪರಿಹಾರೋಪಾಯಗಳು ಈ ದಶಕದ ಸಮಸ್ಯೆಗಳಿಗೆ ಸಾಕಷ್ಟು ಉಪಯೋಗಕ್ಕೆ ಬರಲಾರವೆಂಬುದನ್ನು ಅನುಭವ ತೋರಿಸಿಕೊಟ್ಟಿದೆ.

ಈ ದಶಕದಲ್ಲಿ ನಾವು ನೈಸರ್ಗಿಕ ಸಂಪನ್ಮೂಲಗಳನ್ನು ದುಂದಾಗಿ ಬಳಸಬಾರದೆಂಬುದನ್ನು ಕಲಿಯುತ್ತಿದ್ದೇವೆ. ಹೆಚ್ಚುತ್ತಿರುವ ಪರಸ್ಪರಾವಲಂಬನೆ, ಪ್ರಾಪಂಚಿಕ ಸಂಪನ್ಮೂಲಗಳನ್ನು ಹೆಚ್ಚು ವ್ಯವಸ್ಥಿತವಾಗಿ ಮತ್ತು ಪೋಲಾಗದಂತೆ ಉಪಯೋಗಿಸುವುದರ ಕಡೆಗೆ ನಮ್ಮನ್ನು ಒಯ್ಯುತ್ತಿದೆ.

ಈ ದಶಕದ ಪ್ರತಿಯೊಂದು ಸಮಸ್ಯೆಯೂ ತುರ್ತಿನದಾಗಿದೆ. ವಿಳಂಬದಿಂದಾಗಿಯೂ ಕಾಲಾನುಗುಣವಾಗಿ ಸಂಭವಿಸುತ್ತಿರುವ ಏರಿಳಿತಗಳಿಂದಾಗಿಯೂ ವಿವಿಧ ಮಟ್ಟಗಳಲ್ಲಿ ಇವನ್ನು ಮುಂದೂಡಲಾಗುತ್ತಿದೆ. ಮತ್ತೆ ಹಳೆಯ ಕಾಲ ಬಾರದು. ಪರಿಹಾರದ ಸುಲಭ ಮಾರ್ಗಗಳು ಕಡಿಮೆಯಾಗುತಿರುತ್ತವೆ. ಇವು ಈ ದಶಕದ ಸಮಸ್ಯೆಗಳನ್ನು ಮತ್ತಷ್ಟು ಕ್ಲಿಷ್ಟಗೊಳಿಸಿವೆ. ಈ ದಶಕದಲ್ಲಿನ ಅತ್ಯಂತ ದುರ್ಲಭವಾದ ಸಂಪನ್ಮೂಲವೆಂದರೆ ಮತ್ತೆ ಬಾರದ ಕಾಲ. ಇರುವ ಕಾಲವನ್ನು ನಾವು ಬಳಸಿಕೊಳ್ಳಬೇಕಾಗಿದೆ. ಅದನ್ನು ಈ ಕ್ಷಣ ಬಳಸಿಕೊಳ್ಳಬೇಕಾಗಿದೆ. ಈ ದಶಕದ ಸವಾಲುಗಳನ್ನು ಮುಂದೂಡಲಾಗುವುದಿಲ್ಲ. ಅಂತೆಯೇ ಅವನ್ನು ಗಮನಿಸದೆ ಇರಲಾಗುವುದಿಲ್ಲ; ತತ್‌ಕ್ಷಣವೇ ನಿರ್ಧಾರಗಳನ್ನು ತೆಗೆದುಕೊಳ್ಳಬೇಕಾಗಿದೆ.

ಪ್ರಪಂಚದಲ್ಲಿ ದಿನೇ ದಿನೇ ಹೆಚ್ಚುತ್ತಿರುವ ಪರಸ್ಪರ ಅವಲಂಬನೆಯಿಂದ, ಸಮಸ್ಯೆಗಳು ಮತ್ತಷ್ಟು ಜಟಿಲಗೊಂಡಿವೆ. ಅಭಿವೃದ್ಧಿ ಹೊಂದಿದ ಮತ್ತು ಅಭಿವೃದ್ಧಿ ಹೊಂದುತ್ತಿರುವ ದೇಶಗಳ ಆರ್ಥಿಕ ಲಾಭಗಳು ಒಂದರಲ್ಲೊಂದು ಮಿಳಿತವಾಗಿವೆ. ಎಂಬತ್ತರ ದಶಕದಲ್ಲಿ ಅಭಿವೃದ್ಧಿ ತಂತ್ರವನ್ನು ರೂಪಿಸುವಾಗ, ಅಭಿವೃದ್ಧಿಯ ಮೂಲಭೂತ ಉದ್ದೇಶಗಳು ಏನಿರಬೇಕು ಎಂಬುದನ್ನು ಪರಿಶೀಲಿಸುವ ಅತ್ಯಮೂಲ್ಯವಾದ ಅವಕಾಶ ಅಂತರರಾಷ್ಟ್ರೀಯ ಸಮುದಾಯಕ್ಕೆ ಉಂಟಾಗಿದೆ. ಅಂತರರಾಷ್ಟ್ರೀಯ ತಿಳಿವಳಿಕೆಯಿಂದ ಕೂಡಿದ ಹಾಗೂ ಪರ್ಯಾಯವಾದ ನೀತಿಗಳನ್ನು ಈ ದಶಕದಲ್ಲಿ ಅನುಸರಿಸಬೇಕಾಗಿದೆ. ಪರಸ್ಪರಾವಲಂಬನೆ ಅನಿವಾರ್ಯವಾಗಿ ಹೊಸ ಜಾಗತಿಕ ಅರ್ಥ ವ್ಯವಸ್ಥೆಯ ಕಡೆಗೆ ಮುನ್ನಡೆಯುವಂತೆ ಮಾಡುತ್ತಿದೆ.

## ಎಂಬತ್ತರ ದಶಕದ ಸವಾಲುಗಳು

ಎಂಬತ್ತರ ದಶಕದಲ್ಲಿ ಎದುರಿಸಬೇಕಾದ ಸಮಸ್ಯೆಗಳು ಅನೇಕ. ಅವುಗಳಲ್ಲಿ ಅತ್ಯಂತ ಪ್ರಮುಖವಾದವನ್ನು ಮಾತ್ರ ಇಲ್ಲಿ ಚರ್ಚಿಸಲಾಗಿದೆ.

1 **ಜನಸಂಖ್ಯೆ:** ಮುಂದಿನ ದಶಕದಲ್ಲಿ ಎದುರಿಸ ಬೇಕಾಗಿರುವ ಪರಮಾಣು ಅಸ್ತ್ರ ಯುದ್ಧದಷ್ಟೇ ಭೀಕರವಾದ, ಮಾನವ ಜನಾಂಗದ ಅಳಿವು ಉಳಿವುಗಳನ್ನು ನಿರ್ಧರಿಸುವ ಸಮಸ್ಯೆ ಜನಸಂಖ್ಯೆಯದು. ಅಭಿವೃದ್ಧಿ ಹೊಂದುತ್ತಿರುವ ದೇಶಗಳಲ್ಲಿ ಈ ಜನಸಂಖ್ಯಾ ಹೆಚ್ಚಳ ಅವುಗಳ ಆರ್ಥಿಕ ಮತ್ತು ಸಾಮಾಜಿಕ ಜೀವನಗೆಯ ಹಾದಿಯಲ್ಲಿರುವ ಪ್ರಮುಖ ತೊಡಕಾಗಿದೆ. ಇದು ಈಗಿಗಿಂತ ಹೆಚ್ಚಿನ ಗಮನವನ್ನು ನಿರೀಕ್ಷಿಸುವ ಸಮಸ್ಯೆಯಾಗಿದೆ. ಅಭಿವೃದ್ಧಿ ಶೀಲ ದೇಶಗಳ ಪೈಕಿ ಆರಿಸಿದ ಕೆಲವು ದೇಶಗಳ ಅಂತಿಮ ಸ್ಥಿರ ಜನಸಂಖ್ಯೆಯ ಗಾತ್ರ ಈ ರೀತಿ ಇದೆ:

**ಜನಸಂಖ್ಯೆಯ ಗಾತ್ರ**
ದಶಲಕ್ಷಗಳಲ್ಲಿ

| ದೇಶ | 1979 ರಲ್ಲಿ ಜನಸಂಖ್ಯೆ | ಕ್ರಿ. ಶ. 2000 ವರ್ಷದಲ್ಲಿ ಸಾಧಿತವಾಗುವ 1.0 ನಿವ್ವಳ ಉತ್ಪತ್ತಿ ದರ | 2020ರಲ್ಲಿ ಸಾಧಿತವಾಗುವ 1.0 ನಿವ್ವಳ ಉತ್ಪತ್ತಿ ದರ | ಎರಡು ದಶಕಗಳ ವಿಳಂಬದ ಫಲವಾದ ಶೇಕಡಾವಾರು ಏರಿಕೆ |
|---|---|---|---|---|
| ಭಾರತ | 656 | 1375 | 1700 | 24 |
| ಇಂಡೋನೇಷಿಯ | 139 | 305 | 380 | 25 |
| ಬಾಂಗ್ಲಾದೇಶ | 86 | 215 | 290 | 35 |
| ನೈಜೀರಿಯ | 83 | 225 | 315 | 41 |
| ಮೆಕ್ಸಿಕೋ | 68 | 170 | 230 | 37 |

2 **ಉದ್ಯೋಗ :** ಅಂತರ ರಾಷ್ಟ್ರೀಯ ಕಾರ್ಮಿಕ ಸಂಘದ ಪ್ರಕಾರ ಮುಂದಿನ ಎರಡು ದಶಕಗಳಲ್ಲಿ ಉದ್ಯೋಗಾ ಕಾಂಕ್ಷಿಗಳ ಸಂಖ್ಯೆ 35 ಕೋಟಿಯಷ್ಟು ಹೆಚ್ಚಲಿದೆ. ಇದರ 2/3 ಭಾಗದಷ್ಟು ಜನ ಅಭಿವೃದ್ಧಿಶೀಲ ದೇಶಗಳಲ್ಲಿದ್ದಾರೆ. ನಿರುದ್ಯೋಗದಷ್ಟೇ ಭೀಕರವಾದುದೆಂದರೆ ಅರೆ ಉದ್ಯೋಗ- ಇದು ಒಟ್ಟು ಕಾರ್ಮಿಕ ಶಕ್ತಿಯ 35%ರಷ್ಟಿದೆ ಎಂದು ಅಂದಾಜು ಮಾಡಲಾಗಿದೆ. ಹಿಂದಿನ 25 ವರ್ಷಗಳಲ್ಲಿ ಕೋಟ್ಯಂತರ ಹಳ್ಳಿಗರು ನಗರಗಳಿಗೆ ಕೆಲಸವನ್ನರಸುತ್ತಾ ವಲಸೆ ಹೋಗಿದ್ದಾರೆ. ಇದರಿಂದಾಗಿ ನಗರಗಳ ಜನಸಂಖ್ಯೆ ಪ್ರತಿ 10–15 ವರ್ಷಗಳಲ್ಲಿ ದ್ವಿಗುಣಗೊಳ್ಳುತ್ತಿದೆ ಮತ್ತು ನಗರಗಳಲ್ಲಿ ಕೊಳಚೆ ಪ್ರದೇಶಗಳು ಹೆಚ್ಚುತ್ತಿವೆ. ನಗರೀ ಕರಣವನ್ನು ತಡೆಯಲು ಅಭಿವೃದ್ಧಿ ಹೊಂದುತ್ತಿರುವ ದೇಶಗಳ ಸರ್ಕಾರಗಳು ಅಸಮರ್ಥವಾಗಿವೆ.

3 **ಎಲ್ಲರಿಗೂ ಸಾಕಷ್ಟು ಆಹಾರ :** ಕೋಟ್ಯಂತರ ಜನರು ಹಳ್ಳಿಗಳಿಂದ ನಗರಗಳಿಗೆ ವಲಸೆ ಹೋಗುತ್ತಿರು ವುದರಿಂದ ಆಹಾರೋತ್ಪಾದನೆಯ ಪರಿಮಾಣದಲ್ಲಿ ಬದ ಲಾವಣೆಯಾಗಬೇಕಾಗಿದೆ. ಜೀವಿಸುವುದಕ್ಕೆ ಅಗತ್ಯವಾದಷ್ಟೇ ಅಲ್ಲದೆ, ನಗರ ಪ್ರದೇಶಗಳಿಗೆ ಆಗಿ ಮಿಗುವಷ್ಟು ಆಹಾರವನ್ನು ಉತ್ಪಾದಿಸಬೇಕಾಗಿದೆ. ಅಭಿವೃದ್ಧಿ ಹೊಂದು ತ್ತಿರುವ ದೇಶಗಳು ತಮ್ಮ ಆಹಾರ ಪೂರೈಕೆಯನ್ನು ಈ ಶತಮಾನದ ಕೊನೆಯ ವೇಳೆಗೆ ತ್ರಿಗುಣಗೊಳಿಸದಿದ್ದರೆ. ತಮ್ಮ ಪ್ರಜೆಗಳಿಗೆ ಅಗತ್ಯವಾದ ಕ್ಯಾಲೊರಿಯ ಆಹಾರವನ್ನು ಒದಗಿಸಲಾಗುವುದಿಲ್ಲ. 9–10 ಕೋಟಿ ಟನ್‌ಗಳಷ್ಟು ಆಹಾರ ಧಾನ್ಯಗಳನ್ನು ಆಮದು ಮಾಡಿಕೊಳ್ಳಬೇಕಾಗು ತ್ತದೆ. ಮುಂದಿನ ಎರಡು ದಶಕಗಳಲ್ಲಿ ಕೃಷಿ ಉತ್ಪಾದನೆ ಕಾರ್ಯಕ್ರಮ ದುಬಾರಿಯಾಗಿದ್ದು, ಪ್ರತಿವರ್ಷ 3ರಿಂದ 4 ಕೋಟಿ ಟನ್‌ಗಳಷ್ಟು ವೆಚ್ಚ ಮಾಡಬೇಕಾಗುತ್ತದೆ.

4 **ಕಡುಬಡತನ :** ಅಭಿವೃದ್ಧಿಹೊಂದುತ್ತಿರುವ ಪ್ರಪಂಚದಲ್ಲಿ 80 ಕೋಟಿ ಜನರು ಕಡುಬಡತನದಲ್ಲಿ ಸಿಲುಕಿದ್ದಾರೆ. ಅಪೌಷ್ಟಿಕ ಆಹಾರ, ನಿರಕ್ಷರತೆ, ರೋಗರುಜಿನ. ಅಧಿಕ ಸಂಖ್ಯೆಯಲ್ಲಿ ಮಕ್ಕಳ ಸಾವು, ಕಡಿಮೆ ಆಯುರ್ಮಾನ ಇವು ಕಡುಬಡತನದ ಕುರುಹುಗಳಾಗಿವೆ. ಈ ಸ್ಥಿತಿಗೆ, ತಲೆಗೆಲ್ಲ ಒಂದೇ ಮಂತ್ರವೆಂಬಂತೆ, ಪ್ರಪಂಚಕ್ಕೆಲ್ಲ ಒಂದೇ ಪರಿಹಾರ ಸೂತ್ರವನ್ನು ಅನ್ವಯಿಸಲಾಗುವುದಿಲ್ಲ. ಬದಲಾಗಿ ಆಯಾ ದೇಶಗಳ ಸ್ಥಿತಿಗಳನ್ನನುಸರಿಸಿ ಯೋಜನೆಗಳನ್ನು ರೂಪಿಸಬೇಕಾಗುತ್ತದೆ. ಇಂಥ ಸಮಯದಲ್ಲಿ ಸಮಸ್ಯೆಗಳನ್ನು ಆದ್ಯತಾನುಸಾರ ಪಟ್ಟಿ ಮಾಡಿ ನಿವಾರಣೆಗಳನ್ನು ಕಂಡು ಹಿಡಿಯಬೇಕಾಗುತ್ತದೆ. ಅನೇಕ ದೇಶಗಳಲ್ಲಿ ವಿದ್ಯಾಭ್ಯಾಸ, ಪೌಷ್ಟಿಕ ಆಹಾರ, ನೀರು ಪೂರೈಕೆಗಳಿಗೆ ಆದ್ಯತೆ ನೀಡಲಾಗಿದೆ.

## ಹೊಸ ಅಂತರರಾಷ್ಟ್ರೀಯ ಅಭಿವೃದ್ಧಿ ತಂತ್ರಕ್ಕೆ ಇರುವ ಮಾರ್ಗಗಳು

ಎಪ್ಪತ್ತರ ದಶಕದಲ್ಲಿ ಇಡೀ ಅಭಿವೃದ್ಧಿಶೀಲ ದೇಶಗಳ ಬೆಳವಣಿಗೆಯ ದರ 5.2%ರಷ್ಟು ಮಾತ್ರ. ಆದರೆ ಎಂಬತ್ತರ ದಶಕದಲ್ಲಿ ಅದು ಕನಿಷ್ಠ ಪಕ್ಷ 5.6%ರಷ್ಟಾದರೂ ಸಾಧಿಸಬೇಕು. ಇದು ಅತ್ಯಂತ ಕಡಿಮೆ ನಿರೀಕ್ಷೆಯಾದರೂ

ಸಾಧಿಸಲೇಬೇಕಾಗಿದೆ. ಏಕೆಂದರೆ ಇದು ಅಗತ್ಯಕ್ಕಿಂತ ಕಡಿಮೆಯಾಗುತ್ತದೆ.

**ನಿವಾರಣೆಗಳು:** ಹಿಂದೆ ಹೇಳಿದ ಸವಾಲುಗಳನ್ನು ಬ್ಯಾಂಕು ಮುಂದೆ ಹೇಳುವಂತೆ ಎದುರಿಸಲು ಸಜ್ಜಾಗಿದೆ. ಭದ್ರವಾದ ಆರ್ಥಿಕ ನೆಲಗಟ್ಟಿನ ಮೇಲೆ ಅದು ಎಂಬತ್ತರ ದಶಕಕ್ಕೆ ಕಾಲಿರಿಸುತ್ತಿದೆ. 1979–83ರ ಪಂಚವಾರ್ಷಿಕ ಅವಧಿಯಲ್ಲಿ, ವಿಶ್ವ ಬ್ಯಾಂಕ್ ಗುಂಪಿನ ಸಂಸ್ಥೆಗಳಿಂದ, ಪ್ರಸಕ್ತ ಹಣಕಾಸಿನ ವರ್ಷದಲ್ಲಿ 1,150 ಕೋಟಿ ಡಾಲರ್‌ಗಳಷ್ಟು ಹಣವನ್ನು 300 ಕಾರ್ಯಕ್ರಮಗಳಿಗೆ ಬದ್ಧಗೊಳಿಸುವ ನಿರೀಕ್ಷೆಯಿದೆ; ಮತ್ತು 600 ಕೋಟಿ ಡಾಲರ್‌ಗಳಷ್ಟು ಹಣ ಬಟವಾಡೆಯಾಗಲಿದೆ. ಇದಕ್ಕಾಗಿ ಅಂತರರಾಷ್ಟ್ರೀಯ ಪುನರ್‌ನಿರ್ಮಾಣ ಮತ್ತು ಅಭಿವೃದ್ಧಿ ಬ್ಯಾಂಕಿನ ಬಂಡವಾಳವನ್ನು 4,000 ಕೋಟಿ ಡಾಲರ್‌ಗಳಷ್ಟು ಹೆಚ್ಚಿಸುವಂತೆ ಕಾರ್ಯನಿರ್ವಾಹಕ ನಿರ್ದೇಶಕರು ಬ್ಯಾಂಕಿನ ಗವರ್ನರುಗಳಿಗೆ ಸೂಚಿಸಿದ್ದಾರೆ.

ಅಂತರರಾಷ್ಟ್ರೀಯ ಅಭಿವೃದ್ಧಿ ಸಂಘದ ಗಾತ್ರವನ್ನು ಆರನೆಯ ಪುನರ್ಭರಣದ ಮೂಲಕ ಮುಂದಿನ ವರ್ಷಗಳಲ್ಲಿ ಕಾರ್ಯಗಳಿಗೆ ಬೇಕಾಗುವಷ್ಟು ಹೆಚ್ಚಿಸಲಾಗುವುದು.

ಅಭಿವೃದ್ಧಿಶೀಲ ದೇಶಗಳು ಹೆಚ್ಚುಹೆಚ್ಚಾಗಿ ಬ್ಯಾಂಕಿನ ನೆರವನ್ನು—ತಮಗೆ ಬಾಹ್ಯ ಸಹಾಯ ನೀಡುವ ಸಂಸ್ಥೆಯಾಗಿ ನಿರೀಕ್ಷಿಸುತ್ತಿರುವುದರಿಂದ, ಬ್ಯಾಂಕಿನ ನೀತಿಗಳನ್ನು ಪುನಃ ಪುನಃ ಪರಿಶೀಲಿಸಿ, ಅವಕ್ಕೆ ಹೆಚ್ಚಿನ ನೆರವನ್ನು ನೀಡಲು ಪ್ರಯತ್ನಿಸುತ್ತೇವೆ.

ಜನಸಂಖ್ಯಾ ನಿಯಂತ್ರಣದ ವಿಷಯದಲ್ಲಿ ವಿಶ್ವ ಬ್ಯಾಂಕು ಮೂರು ಬಗೆಯಲ್ಲಿ ಸಹಾಯ ಮಾಡುತ್ತದೆ. ಜನಸಂಖ್ಯಾ ನಿಯಂತ್ರಣದ ಮಹತ್ವದ ಬಗ್ಗೆ ಜನರಲ್ಲಿ ಜಾಗೃತಿಯನ್ನುಂಟುಮಾಡುವುದು; ಸಂತಾನೋತ್ಪತ್ತಿಯನ್ನು ಕಡಿಮೆ ಮಾಡುವ ಕಾರ್ಯಕ್ರಮಗಳಿಗೆ, ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಪರಿಣಾಮಕಾರಿಯಾದ ಕಾರ್ಯಕ್ರಮಗಳಿಗೆ ಆರ್ಥಿಕ ನೆರವು ನೀಡುವುದು; ಮತ್ತು ಸಂತಾನೋತ್ಪತ್ತಿಗೆ, ಸಂಬಂಧಿಸಿದ ವಿಷಯಗಳ ಬಗ್ಗೆ ಸಂಶೋಧನೆಗೆ ಬೆಂಬಲ ನೀಡುವುದು. ಈಗಾಗಲೇ ಅಭಿವೃದ್ಧಿಶೀಲ ಜಗತ್ತಿನ 1/3ರಷ್ಟು ಜನಸಂಖ್ಯೆಯುಳ್ಳ 15 ದೇಶಗಳ ಕುಟುಂಬ ಯೋಜನಾ ಕಾರ್ಯಕ್ರಮಗಳಿಗೆ, ಸಾಮಾನ್ಯ ಸಲಹೆ, ನಿರ್ದೇಶನಗಳ ನೀಡಿಕೆಯನ್ನು ಬ್ಯಾಂಕು ಪೂರ್ಣಗೊಳಿಸಿದೆ. ಮುಂದಿನ 5 ವರ್ಷಗಳಲ್ಲಿ ಇನ್ನೂ 11 ದೇಶಗಳ ಕಾರ್ಯಕ್ರಮಗಳನ್ನು ಪೂರ್ಣಗೊಳಿಸಲಾಗುವುದು. ಇದು 20% ಜನಸಂಖ್ಯೆಯನ್ನು ಒಳಗೊಳ್ಳುತ್ತದೆ.

ಬ್ಯಾಂಕು ನೆರವು ನೀಡುವ ಕುಟುಂಬ ಯೋಜನಾ ಕಾರ್ಯಕ್ರಮಗಳಲ್ಲಿ ಜನಸಂಖ್ಯಾ ಅಧ್ಯಯನ, ಸಣ್ಣ ಕುಟುಂಬ ಹೊಂದಿರಲು ಬೇಕಾದ ಪ್ರೇರಣೆಗಳ ಅಧ್ಯಯನ, ಆರೋಗ್ಯ ಮತ್ತು ಸಂಘಟಿತ ಕುಟುಂಬ ಯೋಜನಾ ವಿಧಾನ ಮುಂತಾದವು ಸೇರಿರುತ್ತವೆ. ಹಿಂದಿನ ಪಂಚವಾರ್ಷಿಕ ಅವಧಿಯಲ್ಲಿ ನೀಡಲಾಗಿರುವುದರ ಎರಡರಷ್ಟು ನೆರವನ್ನು ಮುಂದಿನ 5 ವರ್ಷಗಳಲ್ಲಿ, ನೀಡಲು ಯೋಜಿಸಲಾಗುತ್ತಿದೆ.

ಇದೆಲ್ಲದರಿಂದ ಸಾಮಾಜಿಕ ಮತ್ತು ಆರ್ಥಿಕ ಪ್ರಗತಿಯಾಗಿ, ಬಡವನ ಕಲ್ಯಾಣವಾಗುವುದೆಂದು ಬ್ಯಾಂಕು ನಿರೀಕ್ಷಿಸುತ್ತದೆ. ಕೃಷಿಕ್ಷೇತ್ರದಲ್ಲಿ ಹೆಚ್ಚಿನ ವಿನಿಯೋಜನೆ ಕೇಂದ್ರೀಕೃತವಾಗಿರುವುದರಿಂದ ಸದಸ್ಯ ದೇಶಗಳ ಆಹಾರ ಪೂರೈಕೆಯಲ್ಲಿಯೂ ಬ್ಯಾಂಕು ಮಹತ್ತರ ಪಾತ್ರವನ್ನು ವಹಿಸುತ್ತದೆ.

ವಿಶ್ವ ಬ್ಯಾಂಕು ಆಹಾರೋತ್ಪಾದನೆಗೆ ಅನುವಾಗುವ, ಕೃಷಿ ಅಭಿವೃದ್ಧಿಗೆ ಬಾಹ್ಯನಿಧಿಯನ್ನು ಒದಗಿಸುವ ಏಕೈಕ ಸಂಸ್ಥೆಯಾಗಿದೆ. ಈಗ 40%ರಷ್ಟು ಬಾಹ್ಯ ಸಹಾಯವನ್ನು ಈ ಕ್ಷೇತ್ರಕ್ಕೆ ಒದಗಿಸುತ್ತಿದ್ದೇವೆ. 79–83ರ ಪಂಚವಾರ್ಷಿಕ ಅವಧಿಯಲ್ಲಿ ಬ್ಯಾಂಕು 2,000ದಿಂದ 2,500 ಕೋಟಿ ಡಾಲರ್‌ಗಳಷ್ಟು ಹಣವನ್ನು ಕೃಷಿಕ್ಷೇತ್ರದಲ್ಲಿ ತೊಡಗಿಸಲು ಅಂದಾಜು ಮಾಡಲಾಗಿದೆ. ಇದರಿಂದ 5,000 ಕೋಟಿ ಡಾಲರ್‌ಗಳಷ್ಟು ಮೌಲ್ಯದ ಯೋಜನೆಗಳಿಗೆ ಮತ್ತು ಕಾರ್ಯಕ್ರಮಗಳಿಗೆ ಬೆಂಬಲ ನೀಡಿದಂತಾಗುತ್ತದೆ. ಒಟ್ಟು ಸಾರ್ವಜನಿಕ ಕೃಷಿ ವಿನಿಯೋಜನೆಯ 15%ರಿಂದ 20%ರಷ್ಟು ನೆರವನ್ನು ಅಭಿವೃದ್ಧಿಶೀಲ ದೇಶಗಳಲ್ಲಿ 80ರ ದಶಕದಲ್ಲಿ ಬ್ಯಾಂಕಿನ ಯೋಜನೆಗಳು ವಿನಿಯೋಜಿಸುತ್ತವೆ.

ಆಹಾರ ಸಮಸ್ಯೆಗಳನ್ನು ಎದುರಿಸಲು ರಾಷ್ಟ್ರಗಳು ಪ್ರತ್ಯೇಕವಾಗಿ ಕೈಗೊಳ್ಳುವ ಯೋಜನೆಗಳಿಗೆ ಬೇಕಾದ ತಾಂತ್ರಿಕ ಮತ್ತು ಆರ್ಥಿಕ ನೆರವನ್ನು ನೀಡಲು ಬ್ಯಾಂಕು ಸಿದ್ಧವಿದೆ.

ಬ್ಯಾಂಕು ಈ ರೀತಿ ನೇರವಾಗಿ ನೆರವನ್ನು ನೀಡುವುದಲ್ಲದೆ, ರೈತರಿಗೆ ಸರಿಯಾದ ಬೆಲೆ ಸಿಗಲು, ಹಾಗೂ ಸುಗ್ಗಿಯ ಅನಂತರ ಆಗುವ ನಷ್ಟವನ್ನು ಕಡಿಮೆ ಮಾಡುವ ಮತ್ತು ಪ್ರತಿಕೂಲ ವಾಯುಗುಣಪರಿಸ್ಥಿತಿಯಲ್ಲಿಯೂ ಕೆಲಸ ಮಾಡುವಂಥ, ವಿತರಣ ವ್ಯವಸ್ಥೆಯನ್ನು ಬಲಗೊಳಿಸುವಂಥ, ವಿಕೇಂದ್ರೀಕೃತವಾದ ದಾಸ್ತಾನು ವ್ಯವಸ್ಥೆಯ ಬಗ್ಗೆ ಪರಿಶೀಲನೆ ನಡೆಸುತ್ತದೆ.

ಕಡುಬಡತನವನ್ನು ಕಡಿಮೆಮಾಡಲು ಬ್ಯಾಂಕು ಗ್ರಾಮಾಂತರ ಪ್ರದೇಶಗಳಲ್ಲಿ ಹೆಚ್ಚು ಹೆಚ್ಚು ವಿನಿಯೋಜನೆಗೆ ಸಹಾಯ ಮಾಡುತ್ತಿರುವುದರಿಂದ ಸುಮಾರು 6 ಕೋಟಿ

ಜನರ ಆದಾಯ ಅಧಿಕವಾಗಿದೆ. ಈ ಯೋಜನೆಯನ್ನು ಮುಂದುವರಿಸಲಾಗುವುದು.

ಇದಕ್ಕೆ ಪೂರಕವಾದ ಇನ್ನೆರಡು ಕಾರ್ಯಕ್ರಮಗಳಿಗೆ ಬ್ಯಾಂಕು ಸಹಾಯ ನೀಡುತ್ತದೆ. ಅವೆಂದರೆ ಆರೋಗ್ಯ ಮತ್ತು ನೀರು ಸರಬರಾಜು. ಅರವತ್ತರ ದಶಕದಷ್ಟು ಹಿಂದಿನಿಂದಲೇ ಬ್ಯಾಂಕು ನೀರುಸರಬರಾಜು ಮತ್ತು ನೈರ್ಮಲ್ಯ ಕಾರ್ಯಗಳಿಗೆ ನೆರವು ನೀಡುತ್ತ ಬಂದಿದೆ. 1930ಕ್ಕಿಂತ ಹಿಂದೆ ವಿಶೇಷವಾಗಿ ಇಂಥ ನೆರವು ಅಭಿವೃದ್ಧಿ ಶೀಲ ದೇಶಗಳಲ್ಲಿನ ದೊಡ್ಡ ನಗರಗಳ ಬಹುತೇಕ ಇವು ರಾಜಧಾನಿಗಳು–ನೀರು ಪೂರೈಕೆಯೇ ಮುಂತಾದುವುಗಳ ಕಡೆಗೆ ಮಾತ್ರ ಹರಿಯುತ್ತಿತ್ತು. ಆದರೆ ಎಪ್ಪತ್ತರ ದಶಕ ದಿಂದೀಚೆಗೆ ಅದು ಗ್ರಾಮಾಂತರ ಪ್ರದೇಶಗಳಿಗೂ ಹರಡಿ, ಅಲ್ಲಿಯ ಕಡುಬಡವರ ಜೀವನದ ಮೇಲೆ ಪರಿಣಾಮ ವನ್ನುಂಟುಮಾಡಿದೆ ಮಾತ್ರವಲ್ಲ ಇದು ಅಧೋರಚನೆಗೆ ಕೊಡುಗೆಯಾಗಿ ಪರಿಣಮಿಸಿದೆ.

ಉತ್ತಮ ಜೀವನಮಟ್ಟಕ್ಕೂ ಉತ್ಪಾದಕತೆಗೂ ಹತ್ತಿರದ ಸಂಬಂಧವಿದೆ. ಗ್ರಾಮಾಂತರ ನೀರುಸರಬರಾಜು ಕಾರ್ಯ ಕ್ರಮಗಳಿಂದ ಕಾಲ ಮತ್ತು ಶಕ್ತಿಯ ವ್ಯಯದಲ್ಲಿ ಉಳಿತಾಯ ಕಂಡುಬಂದಿದೆ. ಈ ಮುಂದಿನ ಕಾರ್ಯಕ್ರಮಗಳಿಂದ ಶಕ್ತಿಯ ಆವಶ್ಯಕತೆಗಳನ್ನು ಪೂರೈಸಲು ಬ್ಯಾಂಕು ಯತ್ನಿಸು ತ್ತದೆ: ಅಭಿವೃದ್ಧಿ ಶೀಲ ದೇಶಗಳಲ್ಲಿ ಜಲವಿದ್ಯುತ್ ಉತ್ಪಾದನೆಯನ್ನು ಮೂರು ಪಟ್ಟು ಹೆಚ್ಚಿಸುವುದು ಮತ್ತು ಕಲ್ಲಿದ್ದಲ ಉತ್ಪಾದನೆಯನ್ನು ದ್ವಿಗುಣಗೊಳಿಸುವುದು. ಬ್ಯಾಂಕು ಐದು ವರ್ಷಗಳ ಶಕ್ತಿಯ ಕಾರ್‍ಯಕ್ರಮವನ್ನು ಉದ್ಘಾಟಿಸಿದೆ. ತಾತ್ಕಾಲಿಕವಾಗಿ ಅದರ ಯೋಜನೆಗಳು ಇಂತಿವೆ:

ಪ್ರತಿವರ್ಷ 120 ಕೋಟಿ ಡಾಲರ್‌ಗಳಷ್ಟು ಉದರಿ ಯನ್ನ, 79–83ರ ಪಂಚವಾರ್ಷಿಕ ಅವಧಿಯಲ್ಲಿ ಪೆಟ್ರೋ ಲಿಯಂಗಾಗಿ ಹೆಚ್ಚಿಸುವುದು. ತೈಲ ಮತ್ತು ಅನಿಲ ಶೋಧನೆ ಮತ್ತು ಉತ್ಪಾದನ ಘಟಕಗಳಿಗೆ ಪ್ರತಿ ವರ್ಷ 800 ಕೋಟಿ ಡಾಲರ್‌ಗಳಷ್ಟು ಮೌಲ್ಯದ ಆರ್ಥಿಕ ನೆರವು ನೀಡುವುದು. ಇದು ಅಭಿವೃದ್ಧಿಶೀಲ ದೇಶಗಳ ಆವಶ್ಯಕತೆಯ 1/3 ಭಾಗದಷ್ಟು ವಿನಿಯೋಜನೆಯನ್ನು ಪ್ರತಿನಿಧಿಸುತ್ತದೆ.

ತೈಲ ಮತ್ತು ಅನಿಲ ಶೋಧನೆಗೆ ನೀಡುವ ಆರ್ಥಿಕ ನೆರವಿನಲ್ಲಿ 60%ರಷ್ಟು ನೆರವುಬಡ ರಾಷ್ಟ್ರಗಳಿಗೆ ಸಲ್ಲುತ್ತದೆ. ತೈಲ ಮತ್ತು ಅನಿಲ ಶೋಧನೆಗಾಗಿ ನಡೆಯುವ ಸರ್ವೇಕ್ಷಣ, ಪರಿಶೋಧನಾತ್ಮಕ ಕೊರೆತ (ಎಕ್ಸ್‌ಪ್ಲೊರೇಟರಿ ಡ್ರಿಲ್ಲಿಂಗ್) ಮತ್ತು ಯೋಜನಾ ತಯಾರಿಕೆಗೆ ಉಳಿದ 40% ಆರ್ಥಿಕ ನೆರವು ಸಲ್ಲುತ್ತದೆ.

1978–83ರ ಪಂಚವಾರ್ಷಿಕ ಅವಧಿಯಲ್ಲಿ ಸುಮಾರು 40 ದೇಶಗಳು (ಅವುಗಳಲ್ಲಿ ಹಿಂದೆ ನಡೆದ ಭೂವೈಜ್ಞಾನಿಕ ಸರ್ವೇಕ್ಷಣ ಮತ್ತು ಹೊಸಸರ್ವೇಕ್ಷಣಗಳ ಆಧಾರದ ಮೇಲೆ) ತಮ್ಮ ಬಗ್ಗೆ ಇತ್ತೀಚಿನ ಅಂಕಿಅಂಶಗಳನ್ನು ತಯಾರಿಸಲು ಮತ್ತು ಮೌಲ್ಯಮಾಪನ ಮಾಡುವುದಕ್ಕೆ ಸಹಾಯ ಮಾಡು ವುದು.

ಪ್ರತಿವರ್ಷ ಸುಮಾರು 15 ಅಭಿವೃದ್ಧಿಶೀಲ ದೇಶಗಳಿಗೆ ಅವುಗಳ ಶಕ್ತಿಯ ಆವಶ್ಯಕತೆಗಳನ್ನು ನಿರ್ಧರಿಸುವುದಕ್ಕೆ ಮತ್ತು ಉತ್ಪಾದನ ಸಾಮರ್ಥ್ಯವನ್ನು ಹೆಚ್ಚಿಸುವುದಕ್ಕೆ ಹಾಗೂ ಶಕ್ತಿಯ ಬಗ್ಗೆ ರಾಷ್ಟ್ರೀಯ ಯೋಜನೆಗಳನ್ನು ರೂಪಿಸುವುದಕ್ಕೆ ಸಹಾಯ ಮಾಡುವುದು. ಈ ಕ್ಷೇತ್ರದಲ್ಲಿ ಬ್ಯಾಂಕಿನ ಪಾತ್ರ ಉತ್ತೇರಕವಾದುದು. ಇಂಥ ದುಸ್ತರವಾದ ಕ್ಷೇತ್ರಕ್ಕೆ ಬ್ಯಾಂಕಿನದು ನಮ್ಯವಾದ ಪ್ರತಿಕ್ರಿಯೆಯಾಗಿದೆ.

ಎಂಬತ್ತರ ದಶಕದಲ್ಲಿ ಅಭಿವೃದ್ಧಿಶೀಲ ದೇಶಗಳು ತಮ್ಮ ಒಟ್ಟು ರಫ್ತುಗಳನ್ನು ಪ್ರಪಂಚದ ಒಟ್ಟು ರಫ್ತುಗಳಲ್ಲಿ 11%ರಿಂದ 13%ಕ್ಕೆ ಹೆಚ್ಚಿಸಿಕೊಳ್ಳಬೇಕಾಗಿದೆ.

### ಖಾಸಗಿ ಬಂಡವಾಳ ಹೂಡಿಕೆಗೆ ಬೆಂಬಲ

ಬ್ಯಾಂಕು ಶಕ್ತಿಗಾಗಿ ನೀಡುವ ಸಾಲ ಮಿತವಾದ್ದು ಮತ್ತು ಇಲ್ಲಿ ಬ್ಯಾಂಕಿನ ಪಾತ್ರ ಉತ್ತೇರಕವಾದ್ದು. ಮಧ್ಯಮ ಆದಾಯವುಳ್ಳ, ತ್ವರಿತ ಗತಿಯಲ್ಲಿ ಔದ್ಯೋಗೀಕರಣ ಹೊಂದು ತ್ತಿರುವ ದೇಶಗಳಿಗೆ ವಾಣಿಜ್ಯ ಬ್ಯಾಂಕುಗಳು ಮತ್ತು ಖಾಸಗಿ ಬಂಡವಾಳ ಹೂಡಿಕೆದಾರರಿಂದ ಬಾಹ್ಯ ಆರ್ಥಿಕ ನೆರವು ಬರಬೇಕಾಗಿದೆ. ತಾನು ನೇರವಾಗಿ ಸಾಲ ನೀಡು ವುದರ ಮೂಲಕ ಮತ್ತು ವಾಣಿಜ್ಯ ಬ್ಯಾಂಕುಗಳೊಂದಿಗೆ ಸಹಧನಪೂರಣದ ಮೂಲಕ ಖಾಸಗಿ ಬಂಡವಾಳ ಹೂಡಿಕೆ ಯನ್ನು ಬೆಂಬಲಿಸುತ್ತದೆ. ಅಲ್ಲದೆ ಒಂದೊಂದು ದೇಶಕ್ಕೂ ವಿಶಿಷ್ಟವಾದ, ನೈಜವಾದ ಹಾಗೂ ಸಹ್ಯವಾದ ಅಭಿವೃದ್ಧಿ ತಂತ್ರಗಳನ್ನು ತಯಾರಿಸಲು ಬ್ಯಾಂಕು ಉತ್ತೇಜನ ನೀಡುತ್ತದೆ.

# ಕರ್ನಾಟಕದಲ್ಲಿ ಬ್ಯಾಂಕಿಂಗ್ ಉದ್ಯಮದ ಬೆಳವಣಿಗೆ

ಕೆ. ಎಸ್. ಅಹಲ್ಯಾ

## ರಾಜ್ಯದಲ್ಲಿ ನೂರು ವರ್ಷಗಳಷ್ಟು ಹಳೆಯದಾದ ಬ್ಯಾಂಕಿಂಗ್ ಉದ್ಯಮದ ಇತಿಹಾಸದ ನೋಟ

ಆರ್ಥಿಕ ಅಭಿವೃದ್ಧಿ ಮತ್ತು ಸಾಮಾಜಿಕ ಜೀವನದಲ್ಲಿ ಬ್ಯಾಂಕುಗಳು ವಹಿಸುವ ಪಾತ್ರದ ಬಗ್ಗೆ ಹೆಚ್ಚು ಹೇಳಬೇಕಾದ ಅಗತ್ಯವಿಲ್ಲ. ಬ್ಯಾಂಕಿಂಗ್ ಕ್ಷೇತ್ರದೊಡನೆ ಸಂಬಂಧವಿಲ್ಲದ ಯಾವ ಆರ್ಥಿಕ ಕ್ಷೇತ್ರವೂ ಇಲ್ಲವೆಂದೇ ಹೇಳಬಹುದು. ಆದುದರಿಂದಲೇ ಬ್ಯಾಂಕಿಂಗನ್ನು ಆರ್ಥಿಕ ವ್ಯವಸ್ಥೆಯ ಗತಿಗೆ ಚಾಲನ ನೀಡುವ ಚೇತನ ಶಕ್ತಿ ಎಂದು ಕರೆದಿರುವುದು. ಒಂದು ದಿಶೆಯಲ್ಲಿ ಇದು ಉಳಿತಾಯದ ಸಾಧನವಾಗಿ ಕೆಲಸ ಮಾಡಿದರೆ ಮತ್ತೊಂದು ದಿಶೆಯಲ್ಲಿ ರಿಕ್ತನ ಕಾಮ ಧೇನುವಾಗಿ ಪರಿಣಮಿಸುತ್ತದೆ. ದೇಶದಲ್ಲಿಯ ವಾಣಿಜ್ಯ ಹಾಗೂ ಆರ್ಥಿಕ ಅಭಿವೃದ್ಧಿಗೆ ಬ್ಯಾಂಕಿನ ವರದ ಹಸ್ತ ಆವಶ್ಯಕ. ಬ್ಯಾಂಕಿನ ವ್ಯವಹಾರ ಇಂದು ಧನಿಕ, ಬಡವ, ನಿರಕ್ಷರಿ, ಸಾಕ್ಷರ, ಕಾರ್ಮಿಕ, ಒಕ್ಕಲಿಗ, ದೊಡ್ಡ ಉದ್ಯಮಿ, ಗೃಹ ಕೈಗಾರಿಕೆಯ ಸಣ್ಣ ವ್ಯಕ್ತಿ ಎಂಬ ಭೇದವಿಲ್ಲದೆ ಎಲ್ಲ ವರ್ಗದ ಜನರಿಗೂ ಸಹಾಯ ಸೌಲಭ್ಯಗಳನ್ನು ಒದಗಿಸುತ್ತಿದೆ, ಹೀಗಾಗಿ ಎಲ್ಲ ವರ್ಗದ ಜನರನ್ನೂ ಆಕರ್ಷಿಸಿದೆ.

### ಸ್ಥೂಲ ಚಿತ್ರ

ಕರ್ನಾಟಕ ರಾಜ್ಯದಲ್ಲಿ ಬ್ಯಾಂಕಿಂಗ್ ಪದ್ಧತಿ ಈಚಿನ ದೇನಲ್ಲ; ಅದಕ್ಕೆ ಬಹಳ ದಿನಗಳಿಂದ ಬೆಳೆದು ಬಂದ ಹಿನ್ನೆಲೆ ಇದೆ. ರಾಜ್ಯದಲ್ಲಿ ಬ್ಯಾಂಕುಗಳ ಬೆಳವಣಿಗೆಯನ್ನು ನೋಡ ಬೇಕೆಂದರೆ, ನೂರು ವರ್ಷಗಳಷ್ಟು ಹಿಂದಕ್ಕೆ ನಾವು ಹೋಗ ಬೇಕಾಗುವುದು. "ಹನಿ ಹನಿ ಕೂಡಿದರೆ ಹಳ್ಳ; ತೆನೆ ತೆನೆ ಕೂಡಿದರೆ ರಾಶಿ "ಎಂಬ ತತ್ವದ ಅರಿವಿನ ಫಲವಾಗಿ ಜುಲೈ 1870ರಲ್ಲೇ ಚಿತ್ರದುರ್ಗದಲ್ಲಿ ಪ್ರಪ್ರಥಮ ವಾಣಿಜ್ಯ ಬ್ಯಾಂಕು ಆರಂಭವಾಯಿತು. 1885ರಲ್ಲಿ ನಂಜನಗೂಡಿನಲ್ಲಿ "ನಂಜನ ಗೂಡ್ ಶ್ರೀಕಂಠೇಶ್ವರ ಬ್ಯಾಂಕ್" ಎಂಬ ಎರಡನೆಯ ಬ್ಯಾಂಕ್ ಕಾರ್ಯ ಪ್ರಾರಂಭಿಸಿತು. ಈ ಸುಮಾರಿನಲ್ಲಿ ಆರಂಭವಾದ ಇನ್ನೆರಡು ಸಂಸ್ಥೆಗಳೆಂದರೆ ಬೆಂಗಳೂರು ಯೂನಿಯನ್ ಬ್ಯಾಂಕ್ ಮತ್ತು ಶಿಡ್ಲಘಟ್ಟ ಶ್ರೀ ವೆಂಕಟ ರಾಮಸ್ವಾಮಿ ಬ್ಯಾಂಕ್. ಈ ನಾಲ್ಕು ಸಂಸ್ಥೆಗಳಲ್ಲಿ ಎರಡು ಸಂಸ್ಥೆಗಳು ಧರ್ಮದರ್ಶಿಗಳ ಮೂಲದಿಂದ ಆರಂಭವಾದವು ಗಳು.

ಈ ಶತಮಾನದ ಆದಿಯಲ್ಲಿ ದೇಶದಲ್ಲೆಲ್ಲ ಜನ ಜಾಗೃತಿ ಆಯಿತು. ಅನೇಕ ರಾಷ್ಟ್ರೀಯ ಕಾರ್ಯಕ್ರಮಗಳು ರೂಪು ಗೊಂಡುವು. ಅನೇಕ ವಿದ್ಯಾಸಂಸ್ಥೆಗಳು ಪ್ರಾರಂಭವಾದುವು. ಜನತೆಯ ಆರ್ಥಿಕ ಸ್ಥಿತಿಗತಿಗಳನ್ನು ಸುಧಾರಿಸುವತ್ತ ದೃಷ್ಟಿ ಹರಿಯಿತು. ಹೀಗಾಗಿ ಅನೇಕ ಧಾರ್ಮಿಕ ಸಂಸ್ಥೆಗಳಲ್ಲಿಯ ನಿಧಿಯ ವಿಚಾರವಾಗಿ ಕೂಡ ಕೂಲಂಕಷವಾಗಿ ಅಭ್ಯಾಸ ನಡೆಯಿತು. ಅವುಗಳ ಸದುಪಯೋಗವಾಗುವ ಯೋಜನೆ ಗಳನ್ನು ಹಾಕಿಕೊಂಡರು. ಅದರ ಪರಿಣಾಮವಾಗಿ 'ದಿ ಕೆನರಾ ಹಿಂದೂ ಶಾಶ್ವತನಿಧಿ ನಿಯಮಿತ' ಎಂಬ ಸಂಸ್ಥೆ 1906ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರಿನಲ್ಲಿ ಆರಂಭವಾಯಿತು. ಈ ಸಂಸ್ಥೆ ಕೇವಲ ಲಾಭವನ್ನೇ ಮೂಲ ಉದ್ದೇಶ ಮಾಡಿಕೊಳ್ಳದೇ ಜನರ ಹಿತಾಸಕ್ತಿ ಹಾಗೂ ಕಲ್ಯಾಣವನ್ನೇ ಪರಮ ಗುರಿಯಾಗಿಟ್ಟುಕೊಂಡು ಕಾರ್ಯ ಪ್ರಾರಂಭಿಸಿತು. ಮುಂದೆ 1910ರಲ್ಲಿ ಈ ಸಂಸ್ಥೆಯೇ "ಕೆನರಾ ಬ್ಯಾಂಕ್ ಲಿಮಿಟೆಡ್" ಎಂಬ ಅಭಿಧಾನದಿಂದ ಕಾರ್ಯ ಪ್ರಾರಂಭಿಸಿತು. ಅದೇ ವರ್ಷದಲ್ಲಿ ಉಡುಪಿಯಲ್ಲಿ ಕೆನರಾ ಬ್ಯಾಂಕಿಂಗ್ ಕಾರ್ಪೊರೇಷನ್ ಎಂಬ ಹೆಸರಿನ ಮತ್ತೊಂದು ಸಂಸ್ಥೆ ಜನ್ಮ ತಾಳಿತು.

1908ನೆಯ ಇಸವಿಯಲ್ಲಿ "ಯೂನಿಯನ್ ಬ್ಯಾಂಕ್ ಆಫ್ ವಿಜಾಪುರ ಮತ್ತು ಸೊಲ್ಲಾಪುರ" ಎಂಬ ಸಂಸ್ಥೆ

ವಿಜಾಪುರದಲ್ಲಿ ಶುರುವಾಯಿತು. 1911–20 ಈ ಹತ್ತು ವರ್ಷಗಳ ಅವಧಿಯಲ್ಲಿ ರಾಜ್ಯದಲ್ಲಿ ಸುಮಾರು ಐದು ಬ್ಯಾಂಕಿಂಗ್ ಸಂಸ್ಥೆಗಳು ಜನ್ಮ ತಾಳಿದುವು. 1913ರಲ್ಲಿ 'ಮೈಸೂರು ಬ್ಯಾಂಕ್' ತನ್ನ ಕಾರ್ಯವನ್ನು ಪ್ರಾರಂಭಿಸಿತು. ಆಗ ಬ್ಯಾಂಕ್ ವ್ಯವಹಾರದ ಬಗ್ಗೆ ಒಂದು ಬಗೆಯ ಆತಂಕವಿತ್ತು. ಬರ್ಮದ ಬ್ಯಾಂಕುಗಳ ವೈಫಲ್ಯ ಇದಕ್ಕೆ ಕಾರಣವಾಗಿತ್ತು. ಇದರ ಪರಿಣಾಮ ಮದರಾಸು, ಮುಂಬೈಗಳಂತಹ ನಗರಗಳಲ್ಲಿ ಕಾಣಿಸಿಕೊಂಡಿತ್ತು. ಆದರೆ ಮೈಸೂರು ಬ್ಯಾಂಕ್ ಜನವಿಶ್ವಾಸವನ್ನು ಪ್ರಾರಂಭದಿಂದಲೇ ಗಳಿಸಿಕೊಳ್ಳುವತ್ತ ದೃಷ್ಟಿ ಹರಿಸಿತ್ತು. ರಾಜಾಶ್ರಯವೂ ಘನ ವಿದ್ವಾಂಸರ ಮಾರ್ಗದರ್ಶನವೂ ಇದ್ದ ಕಾರಣ ಇದಕ್ಕೆ ಬಾಲಾರಿಷ್ಟಗಳೇನೂ ಅಂಟಿಕೊಳ್ಳಲಿಲ್ಲ. 1921ರಿಂದ 1930ರ ವರೆಗಿನ ಅವಧಿ ಬ್ಯಾಂಕಿನ ವ್ಯವಹಾರಗಳಲ್ಲಿ ಅತಿ ಮಹತ್ವವಾದ ಅವಧಿ. ಯಾಕೆಂದರೆ ಈ ಅವಧಿಯಲ್ಲಿ ಸುಮಾರು 15 ಬ್ಯಾಂಕುಗಳು ಕಾರ್ಯರೂಪಕ್ಕೆ ಬಂದುವು. ಇದೇ ರೀತಿಯಲ್ಲಿ 1931–40ರ ಅವಧಿಯಲ್ಲಿ ಸುಮಾರು 6 ಬ್ಯಾಂಕುಗಳೂ 1941–50ರ ಅವಧಿಯಲ್ಲಿ 3 ಬ್ಯಾಂಕುಗಳೂ ಕಾರ್ಯಾರಂಭ ಮಾಡಿದುವು.

ರಾಜ್ಯಗಳ ಪುನರ್ವಿಂಗಡಣೆಯ ಅನಂತರ ಎಂದರೆ 1956ರ ಈಚೆಗೆ, ಕರ್ನಾಟಕ ಭಾರತದ ಬ್ಯಾಂಕಿಂಗ್ ನಕ್ಷೆಯಲ್ಲಿ ತನ್ನದೇ ಆದ ಹೆಚ್ಚಿನ ಸ್ಥಾನ ಕಲ್ಪಿಸಿಕೊಂಡಿತು. ಕರ್ನಾಟಕ ರಾಜ್ಯ ಬ್ಯಾಂಕಿಂಗ್ ವಿಷಯದಲ್ಲಿ ಅತಿ ಮಹತ್ವದ ಸ್ಥಾನದಲ್ಲಿ ಇದ್ದು ಬ್ಯಾಂಕು ಕಛೇರಿಗಳ (ಶಾಖಾ ಕಛೇರಿಗಳ) ವಿಷಯದಲ್ಲಿ ನಾಲ್ಕನೆಯ ಸ್ಥಾನದಲ್ಲಿ ಇದೆ. ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಸಿಂಡಿಕೇಟ್ ಬ್ಯಾಂಕ್, ಕೆನರಾ ಬ್ಯಾಂಕ್ ಇವು ಪ್ರಮುಖವಾಗಿ ಕರ್ನಾಟಕದ ಸರ್ವತೋಮುಖ ಅಭಿವೃದ್ಧಿಗೆ ಕಾರಣೀಭೂತವಾಗಿವೆ. ಇವುಗಳಲ್ಲದೆ ಭಾರತದಲ್ಲಿಯ ಎಲ್ಲ ಪ್ರಮುಖ ಬ್ಯಾಂಕುಗಳೂ, ತಮ್ಮ ಶಾಖೆಗಳನ್ನು ಕರ್ನಾಟಕದಲ್ಲಿ, ಅದರಲ್ಲಿಯೂ ಬೆಂಗಳೂರಿನಲ್ಲಿ ತೆರೆದು, ಕರ್ನಾಟಕದ ಆರ್ಥಿಕ ಅಭಿವೃದ್ಧಿಗೆ ಸಹಾಯ ಮಾಡಿವೆ. ಈ ಅವಧಿಯಲ್ಲಿ ಕರ್ನಾಟಕದಲ್ಲಿ ಬ್ಯಾಂಕಿನ ಅಭಿವೃದ್ಧಿ ತೀವ್ರತರದಲ್ಲಿ ಸಾಗಿ ಭದ್ರ ತಳಪಾಯ ಹಾಕಿತು. ಇತ್ತೀಚಿನಲ್ಲಾಗಿ ಎಲ್ಲ ಪ್ರಮುಖ ಬ್ಯಾಂಕುಗಳೂ, ಗ್ರಾಮೀಣ ಪ್ರದೇಶದಲ್ಲಿ ತಮ್ಮ ಶಾಖೆಗಳನ್ನು ತೆಗೆದು, ಗ್ರಾಮೀಣ ಜನತೆಯ ಆರ್ಥಿಕ ಅಭಿವೃದ್ಧಿಗೆ ಸಹಾಯ ಮಾಡುತ್ತಿವೆ. ಹೀಗಾಗಿ ಅವು ಒಂದು ಒಳ್ಳೆಯ ಸಂಪ್ರದಾಯವನ್ನು ಹಾಕಿವೆ.

1956ರಿಂದ ಈಚೆಗೆ ಆಗಿರುವ ಬ್ಯಾಂಕಿಂಗ್ ಉದ್ಯಮದ ಬೆಳವಣಿಗೆಯನ್ನು ಈ ಕೆಳಗಿನ ತಃಖ್ತೆಯಿಂದ ಗುರುತಿಸಬಹುದು.

ತಃಖ್ತೆ 1

| ವರ್ಷ | ಬ್ಯಾಂಕು ಕಾರ್ಯಶಾಖೆಗಳ ಸಂಖ್ಯೆ | ಪ್ರತಿ ಬ್ಯಾಂಕಿನಿಂದ ಸೇವೆ ಪಡೆಯುತ್ತಿರುವ ಸರಾಸರಿ ಜನಸಂಖ್ಯೆ (ಸಾವಿರದಲ್ಲಿ) |
|---|---|---|
| 1 | 2 | 3 |
| 1956 | 361 | 60 |
| 1961 | 462 | 50 |
| 1966 | 612 | 43 |
| 1969* | 761 | 38 |
| 1971 | 1,191 | 25 |
| 1976 | 1,905 | 17 |
| 1978 | 2,480 | 14 |
| 1979** | 2,497 | 13 |
| 1979*** | 2,531 | 12 |

* ಜುಲೈ ಕೊನೆಯ ವರೆಗೆ
** ಮಾರ್ಚ್ ಕೊನೆಯ ವರೆಗೆ
*** ಜೂನ್ ಕೊನೆಯವರೆಗೆ.

1956ರಿಂದ 1979ರ ವರೆಗೆ ಬ್ಯಾಂಕು ಕಛೇರಿಗಳ ಸಂಖ್ಯೆ 361ರಿಂದ 2,531ಕ್ಕೆ ಏರಿ, ಏಳುಪಟ್ಟು ಹೆಚ್ಚಳ ಕಂಡುಬರುತ್ತದೆ. 1956ರಲ್ಲಿ ಸರಾಸರಿ 60 ಸಾವಿರ ಜನಸಂಖ್ಯೆಗೆ ಒಂದು ಬ್ಯಾಂಕಿನ ಸೌಕರ್ಯ ಸಿಕ್ಕಿದ್ದರೆ, 1979ರ ಜೂನ್ ಕೊನೆಗೆ ಹನ್ನೆರಡು ಸಾವಿರ ಜನಸಂಖ್ಯೆಗೆ ಒಂದು ಬ್ಯಾಂಕಿನ ಸೌಕರ್ಯ ಸಿಗುವಂತಾಗಿದೆ. ಬ್ಯಾಂಕುಗಳ ಬೆಳವಣಿಗೆಯ ವೇಗವರ್ಧನೆಯಾದುದು ಜನತೆಗೆ ಹೆಚ್ಚಿನ ಸೇವೆ ಸೌಲಭ್ಯ ಸಿಗುವಂತಾಯಿತು.

### ಬ್ಯಾಂಕಿಂಗ್ ಸೌಲಭ್ಯದ ಚಿತ್ರ

ಕಳೆದ ಹತ್ತು ವರ್ಷಗಳಲ್ಲಿ ಪಟ್ಟಣ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಸೇವೆ ಸಲ್ಲಿಸುತ್ತಿರುವ ಬ್ಯಾಂಕುಗಳ ಸಂಖ್ಯೆ ಈ ಕೆಳಗಿನಂತಿದೆ.:

ತಃಖ್ತೆ 2

| ವರ್ಷ | ಬ್ಯಾಂಕು ಕಾರ್ಯಶಾಖೆಗಳ ಸಂಖ್ಯೆ | | | | |
|---|---|---|---|---|---|
| | ಗ್ರಾಮೀಣ | ಅರೆಶಹರ | ಶಹರ | ಪಟ್ಟಣ | ಒಟ್ಟು |
| 1 | 2 | 3 | 4 | 5 | 6 |
| 1956 | 76 | 187 | 98 | .. | 361 |
| 1961 | 110 | 219 | 133 | .. | 462 |
| 1966 | 146 | 292 | 174 | .. | 612 |
| 1971 | 492 | 379 | 171 | 149 | 1,181 |
| 1976 | 782 | 523 | 213 | 387 | 1,905 |
| 1978 | 1,160 | 590 | 269 | 461 | 2,480 |

1956ರಿಂದ 66ರ ವರೆಗೆ ಶಹರ ಹಾಗೂ ಅರೆಶಹರ ಪ್ರದೇಶಗಳಲ್ಲಿ ಹೆಚ್ಚಿನ ಬ್ಯಾಂಕು ಆಫೀಸುಗಳಿದ್ದು, ಅವುಗಳ ಸೌಲಭ್ಯ ಶಹರದ ಜನತೆಗೆ ಹೆಚ್ಚಿನ ಪ್ರಮಾಣದಲ್ಲಿ ಸಿಗುತ್ತಿದ್ದರೆ, 1966ರ ಅನಂತರ ಗ್ರಾಮೀಣ ವಿಭಾಗದಲ್ಲಿ ಬ್ಯಾಂಕುಗಳ ಸಂಖ್ಯೆ ಹೆಚ್ಚಾಗಿ, ಗ್ರಾಮೀಣ ಜನತೆಗೆ ಬ್ಯಾಂಕುಗಳ ಹೆಚ್ಚಿನ ಸೌಲಭ್ಯ ಸಿಗುವಂತಾಗಿದೆ. ಬ್ಯಾಂಕಿಂಗ್ ಉದ್ಯಮದಲ್ಲಿ 1969ನೆಯ ವರ್ಷ ಸ್ಮರಣೀಯ. ರಾಷ್ಟ್ರದ 14 ಬ್ಯಾಂಕುಗಳ ರಾಷ್ಟ್ರೀಕರಣ ಮಾಡಿ ಭಾರತ ಸರ್ಕಾರ ಚರಿತ್ರಾರ್ಹ ದಾಖಲೆ ಸ್ಥಾಪಿಸಿತು. ಇದೂ ಅಲ್ಲದೆ 1980ನೆಯ ಏಪ್ರಿಲ್ ತಿಂಗಳಲ್ಲಿ ಮತ್ತೆ ಆರು ಬ್ಯಾಂಕುಗಳ ರಾಷ್ಟ್ರೀಕರಣವನ್ನು ಘೋಷಿಸಿತು. ಸಮಾಜವಾದಿ ಸಮಾಜ ರಚನೆ ಈ ರಾಷ್ಟ್ರೀಕರಣದ ಉದಾತ್ತ ಉದ್ದೇಶವಾಗಿತ್ತು. ರಾಷ್ಟ್ರೀಕರಣದಿಂದ ಸಮಾಜದ ಎಲ್ಲ ಹಂತಗಳವರೂ ಬ್ಯಾಂಕಿನ ನೆರವು ಪಡೆದು ತಮ್ಮ ಜೀವನ ಮಟ್ಟ ಸುಧಾರಿಸಿಕೊಳ್ಳಲು ಅವಕಾಶವಾಯಿತು. ಜನಸಾಮಾನ್ಯರು ಹೆಚ್ಚು ಹೆಚ್ಚು ಬ್ಯಾಂಕಿಂಗ್ ಉದ್ಯಮದ ಸೇವೆ ಪಡೆಯು ತೊಡಗಿದರು. 1969ರಿಂದ ಈಚೆಗೆ ರಾಜ್ಯದ ನಾನಾ ಜಿಲ್ಲೆಗಳಲ್ಲಿ ನಡೆದಿರುವ ಬ್ಯಾಂಕಿಂಗ್ ಉದ್ಯಮದ ಪ್ರಗತಿ ಈ ಕೆಳಗಿನ ತಃಖ್ತೆಯಲ್ಲಿ ಗೋಚರಿಸುತ್ತದೆ.

ತಃಖ್ತೆ 3

| ಸಂ. | ಜಿಲ್ಲೆ | ಬ್ಯಾಂಕು ಕಛೇರಿಗಳು | | | | |
|---|---|---|---|---|---|---|
| | | 1969 | 1971 | 1976 | 1978 | 1979 |
| 1 | 2 | 3 | 4 | 5 | 6 | 7 |
| 1 | ಬೆಂಗಳೂರು | 141 | 209 | 401 | 500 | 501 |
| 2 | ಬೆಳಗಾವಿ | 61 | 84 | 132 | 173 | 174 |
| 3 | ಬಳ್ಳಾರಿ | 24 | 35 | 69 | 91 | 94 |
| 4 | ಬಿದರೆ | 7 | 12 | 20 | 28 | 29 |
| 5 | ವಿಜಾಪುರ | 40 | 54 | 83 | 104 | 105 |
| 6 | ಚಿಕ್ಕಮಗಳೂರು | 25 | 41 | 61 | 79 | 79 |
| 7 | ಚಿತ್ರದುರ್ಗ | 21 | 37 | 57 | 71 | 73 |
| 8 | ದಕ್ಷಿಣ ಕನ್ನಡ | 136 | 204 | 294 | 368 | 369 |
| 9 | ಧಾರವಾಡ | 59 | 84 | 135 | 179 | 181 |
| 10 | ಗುಲ್ಬರ್ಗ | 19 | 27 | 40 | 65 | 66 |
| 11 | ಹಾಸನ | 23 | 36 | 59 | 78 | 78 |
| 12 | ಕೊಡಗು | 19 | 42 | 57 | 66 | 66 |
| 13 | ಕೋಲಾರ .. | 18 | 35 | 52 | 74 | 74 |
| 14 | ಮಂಡ್ಯ | 16 | 26 | 47 | 70 | 70 |
| 15 | ಮೈಸೂರು | 44 | 74 | 114 | 169 | 171 |
| 16 | ರಾಯಚೂರು | 20 | 39 | 54 | 78 | 79 |
| 17 | ಶಿವಮೊಗ್ಗ | 34 | 65 | 91 | 109 | 109 |
| 18 | ತುಮಕೂರು | 17 | 36 | 56 | 75 | 76 |
| 19 | ಉತ್ತರ ಕನ್ನಡ | 31 | 51 | 83 | 103 | 103 |
| | ಒಟ್ಟು | 755 | 1,191 | 1,905 | 2,480 | 2,497 |

ಜಿಲ್ಲಾವಾರು ಬ್ಯಾಂಕು ಪ್ರಗತಿಯನ್ನು ನೋಡಿದರೆ ಬೆಂಗಳೂರು ಜಿಲ್ಲೆ ಮೊದಲನೆಯ ಸ್ಥಾನದಲ್ಲಿದ್ದರೆ, ಬೀದರ್ ಜಿಲ್ಲೆ ಕಡೆಯ ಸ್ಥಾನದಲ್ಲಿ ಇದೆ. ಬೆಂಗಳೂರು, ದಕ್ಷಿಣ ಕನ್ನಡ, ಧಾರವಾಡ, ಬೆಳಗಾವಿ ಮತ್ತು ಮೈಸೂರು ಈ ಐದು ಜಿಲ್ಲೆಗಳಲ್ಲಿಯೇ ರಾಜ್ಯದ ಒಟ್ಟು ಬ್ಯಾಂಕ್ ಶಾಖೆಗಳಲ್ಲಿ ಶೇಕಡ ಸುಮಾರು 55ರಷ್ಟು ಶಾಖೆಗಳಿವೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪ್ರತಿ 9,000 ಜನಗಳಿಗೆ ಒಂದರಂತೆ ಬ್ಯಾಂಕ್ ಸೌಲಭ್ಯ ಇದ್ದರೆ, ಅದೇ ಗುಲ್ಬರ್ಗ ಜಿಲ್ಲೆಯಲ್ಲಿ 62,000 ಜನಸಂಖ್ಯೆಗೆ ಒಂದರಂತೆ ಇದೆ. ಹೀಗಾಗಿ ಬ್ಯಾಂಕಿಂಗ್ ಸೌಲಭ್ಯದಲ್ಲಿ ಅಸಮಾನತೆ ಕಂಡುಬರುತ್ತಿದೆ. ಏನೇ ಇದ್ದರೂ ಎಲ್ಲ ಜಿಲ್ಲೆಗಳಲ್ಲೂ ಬ್ಯಾಂಕಿಂಗ್ ಉದ್ಯಮದ ವಿಸ್ತರಣೆ ಹೆಚ್ಚಿರುವುದು ಸ್ಪಷ್ಟವಿದೆ.

**ಅದ್ಭುತ ಪ್ರಗತಿ**

ರಾಜ್ಯದ ಬ್ಯಾಂಕಿಂಗ್ ಅಭಿವೃದ್ಧಿಯ ಇತರ ಸೂಚನೆಗಳೆಂದರೆ ಠೇವಣಿಗಳ ಸಂಗ್ರಹ ಮತ್ತು ಸಾಲ ವಿತರಣೆಯ ಪ್ರಮಾಣಗಳು. ಈ ಲೆಕ್ಕಾಚಾರಕ್ಕೆ ಬೇಕಾದ ಮಾಹಿತಿ ದೊರೆತಿರುವುದು 1961ರಿಂದ ಈಚೆಗೆ ಮಾತ್ರ. 1961ರಿಂದ ಇಲ್ಲಿಯ ವರೆಗೆ ಬ್ಯಾಂಕ್ ಠೇವಣಾತಿ ಮತ್ತು ಸಾಲ ವಿತರಣೆಯಲ್ಲಿ ಗಣನೀಯ ಪ್ರಮಾಣದ ಬೆಳವಣಿಗೆ ಕಂಡು ಬಂದಿದೆ. ಇದನ್ನು ಈ ಕೆಳಗಿನ ತಃಖ್ತೆಯಿಂದ ಕಾಣಬಹುದು.

ತಃಖ್ತೆ 4

| ವಿಷಯ | ವರ್ಷ | | | | | |
|---|---|---|---|---|---|---|
| | 1961 | 1967 | 1971 | 1976 | 1977 | 1978 |
| 1 | 2 | 3 | 4 | 5 | 6 | 7 |
| | (ಕೋಟಿ ರೂಪಾಯಿಗಳಲ್ಲಿ) | | | | | |
| ಠೇವಣಾತಿಗಳು | 77.59 | 192.44 | 369.24 | 740.73 | 775.79 | 1,341.26 |
| ತಲಾವಾರು ಠೇವಣಿ (ರೂ.ಗಳಲ್ಲಿ) | 33 | 70 | 126 | 223 | 222 | 378 |
| ನೀಡಲಾದ ಸಾಲ | 52.39 | 166.07 | 275.43 | 733.36 | 544.86 | 1,091.27 |
| ತಲಾವಾರು ಸಾಲ (ರೂ.ಗಳಲ್ಲಿ) | 22 | 60 | 94 | 221 | 156 | 307 |

1961ರಿಂದ 78ರ ವರೆಗೆ ಬ್ಯಾಂಕುಗಳು ಸಂಗ್ರಹಿಸಿರುವ ಠೇವಣಿಗಳನ್ನು ಪರಿಶೀಲಿಸಿದರೆ ಕೇವಲ 17 ವರ್ಷಗಳ ಅವಧಿಯಲ್ಲಿ ಠೇವಣಾತಿಯ ಪರಿಮಾಣ ಹದಿನೇಳು ಪಟ್ಟು ಹೆಚ್ಚಾದುದು ಕಂಡುಬರುವುದು. ತಲಾವಾರು ಠೇವಣಿಯು 1961ರಲ್ಲಿ ರೂ, 33 ಇದ್ದರೆ 1978ರ ಕೊನೆಗೆ ರೂ. 378 ಇದೆ. ಎಂದರೆ ಸುಮಾರು ಹನ್ನೊಂದು ಪಟ್ಟು ಹೆಚ್ಚಳ ಕಂಡು ಬರುವುದು. 1961 ರಿಂದ 78ರ ವರೆಗೆ ನೀಡಲಾದ ಸಾಲದ ಪರಿಮಾಣವನ್ನು ಪರಿಶೀಲಿಸಿದರೆ ಸಾಲ ನೀಡಿಕೆಯ ಪ್ರಮಾಣ ಸುಮಾರು 20 ಪಟ್ಟು ಹೆಚ್ಚಾದುದು ಕಂಡುಬರುವುದು. ತಲಾವಾರು ಸಾಲ 1961ರಲ್ಲಿ ರೂ. 22 ಇದ್ದರೆ ಅದೇ 1978ರ ಕೊನೆಗೆ ರೂ. 307 ಎಂದರೆ ಹದಿನಾಲ್ಕು ಪಟ್ಟು ಹೆಚ್ಚಾದಂತಾಯಿತು. ಠೇವಣಿ ಸಂಗ್ರಹ ಮತ್ತು ಸಾಲ ಹಂಚಿಕೆಯಲ್ಲಿ ಸಾಧಿಸಿರುವ ಹೆಚ್ಚಳ ಬ್ಯಾಂಕಿಂಗ್ ಕ್ಷೇತ್ರದಲ್ಲಿ ನಡೆದಿರುವ ಭಾರಿ ಪ್ರಮಾಣದ ಪ್ರಗತಿಗೆ ಸಾಕ್ಷಿಯಾಗಿದೆ.

ನಾನಾ ಜಿಲ್ಲೆಗಳಲ್ಲಿ ಸಾಧಿಸಿದ ಠೇವಣಿ ಸಂಗ್ರಹದ ಪ್ರಗತಿಯನ್ನು ಈ ಕೆಳಗಿನ ತಃಖ್ತೆಯಲ್ಲಿ ನೋಡಬಹುದು.

ತಃಖ್ತೆ 5

(ಕೋಟಿ ರೂ.ಗಳಲ್ಲಿ)

| ಸಂ. | ಜಿಲ್ಲೆಯ ಹೆಸರು | ಠೇವಣಾತಿ | | | |
|---|---|---|---|---|---|
| | | 1969 | 1971 | 1976 | 1978 |
| 1 | 2 | 3 | 4 | 5 | 6 |
| 1 | ಬೆಂಗಳೂರು | 92.08 | 153.45 | 291.81 | 565.43 |
| 2 | ಬೆಳಗಾವಿ | 16.35 | 22.48 | 49.60 | 80.74 |
| 3 | ಬಳ್ಳಾರಿ | 4.89 | 6.66 | 15.65 | 26.56 |
| 4 | ಬೀದರ್ | 0.97 | 1.50 | 3.37 | 6.42 |
| 5 | ವಿಜಾಪುರ | 6.30 | 8.52 | 18.66 | 31.65 |
| 6 | ಚಿಕ್ಕಮಗಳೂರು | 4.96 | 7.00 | 16.00 | 35.82 |
| 7 | ಚಿತ್ರದುರ್ಗ | 3.29 | 6.28 | 14.08 | 24.43 |
| 8 | ದಕ್ಷಿಣ ಕನ್ನಡ | 38.15 | 54.60 | 102.18 | 174.51 |
| 9 | ಧಾರವಾಡ | 14.04 | 22.14 | 46.46 | 74.35 |
| 10 | ಗುಲ್ಬರ್ಗ | 4.85 | 5.36 | 10.64 | 20.01 |
| 11 | ಹಾಸನ | 3.91 | 7.00 | 14.63 | 29.34 |
| 12 | ಕೊಡಗು | 6.38 | 8.15 | 17.92 | 36.75 |
| 13 | ಕೋಲಾರ | 3.00 | 5.25 | 13.66 | 23.56 |
| 14 | ಮಂಡ್ಯ | 1.65 | 3.37 | 7.70 | 14.74 |
| 15 | ಮೈಸೂರು | 15.35 | 23.96 | 47.09 | 80.68 |
| 16 | ರಾಯಚೂರು | 3.32 | 4.91 | 14.91 | 18.35 |
| 17 | ಶಿವಮೊಗ್ಗ | 7.68 | 10.93 | 22.09 | 38.03 |
| 18 | ತುಮಕೂರು | 3.33 | 5.53 | 13.36 | 23.23 |
| 19 | ಉತ್ತರ ಕನ್ನಡ | 6.55 | 9.75 | 20.96 | 36.66 |
| | ಒಟ್ಟು | 236.85 | 369.24 | 740.73 | 1,341.26 |

ಠೇವಣಿಗಳ ಸಂಖ್ಯೆಯ ವಿಷಯದಲ್ಲಿ ಬೆಂಗಳೂರು ಜಿಲ್ಲೆ ಪ್ರಥಮ ಸ್ಥಾನದಲ್ಲಿದ್ದರೆ, ಬೀದರ್ ಜಿಲ್ಲೆ ಕಡೆಯ ಸ್ಥಾನದಲ್ಲಿದೆ. ದಕ್ಷಿಣ ಕನ್ನಡ, ಬೆಳಗಾವಿ, ಮೈಸೂರು, ಧಾರವಾಡ ಜಿಲ್ಲೆಗಳು ಕೂಡ ಠೇವಣಿ ಸಂಗ್ರಹಣೆಯಲ್ಲಿ ಹೆಚ್ಚಿನ ಪ್ರಗತಿ ಸಾಧಿಸಿವೆ. ಮಂಡ್ಯ ಜಿಲ್ಲೆ ಸಾಂಪತ್ತಿಕ ಸ್ಥಿತಿಯಲ್ಲಿ ಚೆನ್ನಾಗಿದ್ದರೂ ಬ್ಯಾಂಕಿಂಗ್ ಉದ್ಯಮದಲ್ಲಿ ಅಷ್ಟೊಂದು ಪ್ರಗತಿಯನ್ನು ಸಾಧಿಸಿಲ್ಲ.

ಈ ಕೆಳಗಿನ ತಃಖ್ತೆಯಿಂದ ನಾನಾ ಜಿಲ್ಲೆಗಳಲ್ಲಿ, ನೀಡಲಾಗಿರುವ ಸಾಲದ ವಿವರಣೆಯನ್ನು ತಿಳಿಯಬಹುದು.

ತಃಖ್ತೆ 6

(ಕೋಟಿ ರೂ. ಗಳಲ್ಲಿ)

| ಸಂ. | ಜಿಲ್ಲೆಯ ಹೆಸರು | ಮಂಜೂರು ಮಾಡಿದ ಸಾಲ | | | |
|---|---|---|---|---|---|
| | | 1969 | 1971 | 1976 | 1978 |
| 1 | 2 | 3 | 4 | 5 | 6 |
| 1 | ಬೆಂಗಳೂರು | 86.53 | 114.19 | 394.55 | 546.61 |
| 2 | ಬೆಳಗಾವಿ | 7.55 | 11.15 | 29.22 | 45.71 |
| 3 | ಬಳ್ಳಾರಿ | 5.46 | 9.82 | 20.41 | 35.32 |
| 4 | ಬೀದರ್ | 0.35 | 0.67 | 1.98 | 4.76 |
| 5 | ವಿಜಾಪುರ | 2.78 | 3.31 | 12.51 | 17.91 |
| 6 | ಚಿಕ್ಕಮಗಳೂರು | 2.63 | 6.39 | 16.76 | 25.83 |
| 7 | ಚಿತ್ರದುರ್ಗ | 7.62 | 8.63 | 21.09 | 29.32 |
| 8 | ದಕ್ಷಿಣ ಕನ್ನಡ | 20.38 | 28.22 | 70.18 | 112.53 |
| 9 | ಧಾರವಾಡ | 7.16 | 11.76 | 34.28 | 51.18 |
| 10 | ಗುಲ್ಬರ್ಗ | 2.06 | 2.71 | 5.53 | 11.79 |
| 11 | ಹಾಸನ | 1.93 | 5.34 | 16.60 | 18.38 |
| 12 | ಕೊಡಗು | 1.69 | 3.51 | 8.10 | 16.60 |
| 13 | ಕೋಲಾರ | 0.53 | 2.45 | 8.00 | 14.53 |
| 14 | ಮಂಡ್ಯ | 0.69 | 1.55 | 6.99 | 11.86 |
| 15 | ಮೈಸೂರು | 7.46 | 10.76 | 30.44 | 51.00 |
| 16 | ರಾಯಚೂರು | 2.82 | 3.59 | 14.69 | 21.74 |
| 17 | ಶಿವಮೊಗ್ಗ | 13.51 | 16.33 | 26.00 | 48.51 |
| 18 | ತುಮಕೂರು | 1.68 | 2.62 | 10.00 | 13.86 |
| 19 | ಉತ್ತರ ಕನ್ನಡ | 1.38 | 2.43 | 8.83 | 13.83 |
| | ಒಟ್ಟು | 174.62 | 275.43 | 733.3 | 1,091.27 |

ಬ್ಯಾಂಕುಗಳ ಸಾಲ ಹಂಚಿಕೆಯಲ್ಲಿ ಬೆಂಗಳೂರು ಜಿಲ್ಲೆ ಮೊದಲನೆಯ ಸ್ಥಾನದಲ್ಲಿದೆ. ರಾಜ್ಯದ ಒಟ್ಟು ಸಾಲ ವಿತರಣೆಯಲ್ಲಿ ಶೇಕಡ 50ರಷ್ಟು ಬೆಂಗಳೂರು ಜಿಲ್ಲೆಯಲ್ಲಿ ನಡೆದಿದೆ. ಬೀದರ್ ಜಿಲ್ಲೆಯಲ್ಲಿ ಅತಿ ಕಡಿಮೆ ಸಾಲ ವಿತರಣೆ ಮಾಡಲಾಗಿದೆ. ಬೆಂಗಳೂರಿನ ಅನಂತರ ದಕ್ಷಿಣ ಕನ್ನಡ ಜಿಲ್ಲೆಗೆ ಸಾಲ ವಿತರಣೆಯ ವಿಷಯದಲ್ಲಿ ಎರಡನೆಯ ಸ್ಥಾನ ಲಭಿಸುವುದು. ಧಾರವಾಡ, ಮೈಸೂರು, ಶಿವಮೊಗ್ಗ, ಬೆಳಗಾವಿ ಜಿಲ್ಲೆಗಳಿಗೆ ಅನಂತರದ ಸ್ಥಾನ ಲಭಿಸುವುದು.

ಬ್ಯಾಂಕುಗಳ ರಾಷ್ಟ್ರೀಕರಣಾನಂತರ, ಅವುಗಳ ಸೇವಾ ರೂಪವೇ ಬಹುಮಟ್ಟಿಗೆ ಮಾರ್ಪಟ್ಟಿದೆ. ಕೇವಲ ಲಾಭಗಾರಿಕೆಯೇ ಬ್ಯಾಂಕುಗಳ ಉದ್ದೇಶವೆಂದು ತಿಳಿದಿದ್ದ ಕಾಲ ಹೊಂದಿತ್ತು. ಆದರೆ ಈಗ ರಾಷ್ಟ್ರದ ಆರ್ಥಿಕ ಹಾಗೂ ಸಾಮಾಜಿಕ ಅಭಿವೃದ್ಧಿಯ ಸಾಧನಗಳಾಗಿ ಬ್ಯಾಂಕುಗಳು ಕೆಲಸ ಮಾಡುತ್ತಿವೆ. ಬೃಹತ್ಪ್ರಮಾಣದ ಕೈಗಾರಿಕೆಗಳಿಗೆ ಮತ್ತು ವ್ಯಾಪಾರಕ್ಕೆ ಮಾತ್ರ ಹೆಚ್ಚು ಹೆಚ್ಚು ಬ್ಯಾಂಕುಗಳು ಸಾಲ ಕೊಡುತ್ತಿದ್ದ ಕಾಲ ಹೋಗಿ ವ್ಯವಸಾಯ, ಸಣ್ಣಪುಟ್ಟ ಕೈಗಾರಿಕೆಗಳು ಮತ್ತು ಸಣ್ಣ ಉದ್ಯಮ ಮುಂತಾದುವಕ್ಕೆ ಆದ್ಯತೆ ದೊರಕುತ್ತಿದೆ. 1978ರ ಅವಧಿಯಲ್ಲಿ ಕರ್ನಾಟಕದಲ್ಲಿ 376.66 ಕೋಟಿ.ರೂಪಾಯಿಗಳಷ್ಟು ಸಾಲ ಹಂಚಿಕೆ ಈ ಕ್ಷೇತ್ರಗಳಲ್ಲಿ ಆಗಿದೆ: ಕೃಷಿಕ್ಷೇತ್ರದಲ್ಲಿ 184.77 ಕೋಟಿ ರೂ.ಗಳೂ, ಸಣ್ಣ ಕೈಗಾರಿಕೆಗಳಿಗೆ 119.72 ಕೋಟಿ ರೂ.ಗಳೂ ವಿತರಣೆಯಾಗಿವೆ. ಹೀಗೆ, ಕೇವಲ ವಾಣಿಜ್ಯ ಮನೋಭಾವವನ್ನು ಹೊಂದಿದ್ದ ಬ್ಯಾಂಕುಗಳು ಇಂದು ಸಾರ್ವಜನಿಕ ಸೇವೆಯಲ್ಲಿ ನಿರತವಾಗಿವೆ. ಈ ಬದಲಾವಣೆ ದೇಶದ ಪ್ರಗತಿಗೆ ಬಹುಮಟ್ಟಿಗೆ ಸಹಾಯಕಾರಿಯಾಗಿದೆ.

# ಕಪ್ಪು ಹಣ–ಒಂದು ವಿವೇಚನೆ

ಕೃಷ್ಣೇಗೌಡ

**ಅರ್ಬುದ ವ್ಯಾಧಿಯಂತೆ ದೇಶದಲ್ಲಿ ಬೆಳೆದು ನಮ್ಮ ಅರ್ಥವ್ಯವಸ್ಥೆಗೆ ಸಮಾಂತರವಾದ ಇನ್ನೊಂದು ವ್ಯವಸ್ಥೆಯನ್ನೇ ಸೃಷ್ಟಿಸಿರುವ ಕಪ್ಪು ಹಣವನ್ನು ಕುರಿತ ಅಧ್ಯಯನಪೂರ್ವಕ ವಿವೇಚನೆ**

ಭಾರತದ ಅರ್ಥವ್ಯವಸ್ಥೆಯ ಮೇಲೆ ಕಪ್ಪು ಹಣವಂತರ ಹಿಡಿತ ಬಿಗಿಯಾಗುತ್ತಿರುವುದು ನಿರ್ವಿವಾದವಾದ ಸಂಗತಿ. ಈ ಬದನಿಕೆಯ ಅನಾಯಾಸ ಬೆಳವಣಿಗೆ ಮತ್ತು ಇದರಿಂದ ರಾಷ್ಟ್ರದ ಬೆಳವಣಿಗೆಗೆ ತಟ್ಟುವ ಗಂಡಾಂತರಗಳು ಕಲ್ಪನೆಗೆ ಮೀರಿದುವು. ರಾಷ್ಟ್ರದ ಅರ್ಥವ್ಯವಸ್ಥೆ ಸ್ಥಗಿತಗೊಳ್ಳುವ ಮಟ್ಟಕ್ಕೆ ಇಂದು ಕಪ್ಪುಹಣ ವೃದ್ಧಿಯಾಗಿದೆ. ಆದ್ದರಿಂದ, ಅಭಿವೃದ್ಧಿಯ ಹಾದಿಯಲ್ಲಿರುವ ಅರ್ಥವ್ಯವಸ್ಥೆ ಸಂಪೂರ್ಣವಾಗಿ ಸ್ಥಗಿತಗೊಳ್ಳುವ ಮೊದಲು ಕಪ್ಪುಹಣದ ಬೆಳವಣಿಗೆಯನ್ನು ತಡೆಗಟ್ಟುವ ಕ್ರಮ ಕೈಗೊಳ್ಳಬೇಕಾದ್ದು ಅತ್ಯಾವಶ್ಯಕವಾಗಿದೆ. ಪ್ರಸ್ತುತ ಲೇಖನ ಭಾರತದ ಅರ್ಥವ್ಯವಸ್ಥೆಯಲ್ಲಿ ಕಪ್ಪು ಹಣದ ಬೆಳವಣಿಗೆಯನ್ನು ತಡೆಗಟ್ಟುವ ಸಾಧ್ಯಾಸಾಧ್ಯತೆಗಳನ್ನು ಕುರಿತ ಒಂದು ವಿವೇಚನೆಯಾಗಿದೆ.

ಕೆಟ್ಟ ಹಣ ಒಳ್ಳೆಯ ಹಣವನ್ನು ಚಲಾವಣೆಯಿಂದ ಹೊರದೂಡುತ್ತದೆ ಎಂಬುದು ಗ್ರೆಷಾಮನ ನಿಯಮ. ಆದರೆ ಈ ನಿಯಮಕ್ಕೆ ಅಪವಾದವಾಗಿ ಆಧುನಿಕ ವಿಶ್ವ ವಿಶೇಷವಾದ ಕಪ್ಪುಹಣ ಕಾನೂನುಬದ್ಧವಾದ ಹಣವನ್ನು ಚಲಾವಣೆಯಿಂದ ಹೊರದೂಡುವುದಿಲ್ಲ. ಪ್ರತಿಯಾಗಿ ಎರಡಕ್ಕೂ ಭೇದ ಕಲ್ಪಿಸಲಾಗದಿರುವಷ್ಟರಮಟ್ಟಿಗೆ ಇಡೀ ಅರ್ಥವ್ಯವಸ್ಥೆಯಲ್ಲಿ ಒಂದಾಗಿಬಿಡುತ್ತದೆ. ಕಳೆ ಯಾವುದು ಬೆಳೆ ಯಾವುದು ಎಂದು ಗುರುತಿಸಲಾಗದಂಥ ಪರಿಸ್ಥಿತಿ ಉಂಟಾಗುತ್ತದೆ. ಇಂಥ ಪರಿಸ್ಥಿತಿ ಇರುವ ಭಾರತದ ಅರ್ಥವ್ಯವಸ್ಥೆಯನ್ನು 'ಕಪ್ಪುಪಟ್ಟಿಯ ಮಧ್ಯೆ ಬಿಳಿಯ ಪಟ್ಟಿಯೋ ಅಥವಾ ಬಿಳಿಯ ಪಟ್ಟಿಯ ಮಧ್ಯೆ ಕಪ್ಪು ಪಟ್ಟಿಯೋ" ಎಂದು ಗುರುತಿಸಲಾಗದಿರುವ ಹೇಸರಗತ್ತೆಗೆ ಹೋಲಿಸಬಹುದಾಗಿದೆ.

ಭಾರತದ ಅರ್ಥವ್ಯವಸ್ಥೆಯಲ್ಲಿ ಪ್ರಸಾಮಾನ್ಯ ಅರ್ಥವ್ಯವಸ್ಥೆ ಮತ್ತು ಇದಕ್ಕೆ ಸಮಾಂತರವಾಗಿಯೇ ಬೆಳೆದು ಬಂದಿರುವ ಅಡ್ಡ ಅಥವಾ ಕ್ರಮವಲ್ಲದ ಅರ್ಥವ್ಯವಸ್ಥೆ (Parallel Economy) ಇವುಗಳನಡುವಣ ಧ್ರುವೀಕರಣ ಇತ್ತೀಚಿನ ವರ್ಷಗಳಲ್ಲಿ ಹೆಚ್ಚು ದೃಢವಾಗುತ್ತಿದೆ. ಕಪ್ಪು ಹಣದ ಚಲಾವಣೆ ಹೆಚ್ಚಾಗುತ್ತಿದ್ದು ಅರ್ಥ ವ್ಯವಸ್ಥೆಯ ರಕ್ಷಣ ಕವಾಟ ನಿಷ್ಕ್ರಿಯೆಗೊಳ್ಳುತ್ತಿದೆ. ಸರ್ಕಾರದ ನಿರ್ದೇಶನ ಹಾಗೂ ನಿಯಂತ್ರಣ ಕಟ್ಟುಪಾಡುಗಳು ಮುರಿದು ಬೀಳುತ್ತಿವೆ. ದೇಶದಲ್ಲಿ ಹಣದುಬ್ಬರ ಹೆಚ್ಚಾಗುತ್ತಿರುವುದಕ್ಕೆ ಕಪ್ಪುಹಣವೇ ಮುಖ್ಯವಾದ ಕಾರಣ ಎಂಬುದು ಸ್ಪಷ್ಟವಾಗಿದೆ.

ಹಣದುಬ್ಬರದ ಸಂಕೀರ್ಣ ಸ್ವರೂಪವನ್ನು ಪರಿಶೀಲಿಸಿರುವ ಕೆ. ಎನ್. ವಾಂಛೂ ಸಮಿತಿ ಅಭಿಪ್ರಾಯ ಪಟ್ಟಿರುವಂತೆ, ಕಪ್ಪುಹಣವೆಂದರೆ ಕೇವಲ ಗುಪ್ತ ತಿಜೋರಿಯಲ್ಲಿ ಇರುವ ಅಥವಾ ಅಕ್ರಮ ವ್ಯವಹಾರಗಳಲ್ಲಿ ಚಲಾವಣೆಯಲ್ಲಿರುವ ಲೆಕ್ಕಕ್ಕೆ ಸಿಗದ ಹಣವಷ್ಟೇ ಅಲ್ಲ; ಚಿನ್ನ, ಒಡವೆ, ಭೂಮಿ, ಕಟ್ಟಡಗಳು ಷೇರುಗಳು, ಕಟ್ಟಿಗೆ ಸಿಗದ ವ್ಯಾಪಾರ ಸ್ವತ್ತುಗಳು ಇವುಗಳಲ್ಲೂ ಕಪ್ಪು ಹಣ ವಿನಿಯೋಗವಾಗಿದೆ. ಒಟ್ಟಿನಲ್ಲಿ ಅಕ್ರಮವಾಗಿ ಸಂಪಾದಿಸಿದ ಹಣದ ಜೊತೆಗೆ ತೆರಿಗೆಯ ಕಣ್ಣು ತಪ್ಪಿಸಿಕೊಂಡ ಎಲ್ಲಾ ವರಮಾನವನ್ನೂ ಕಪ್ಪು ಹಣ ಪ್ರತಿನಿಧಿಸುತ್ತದೆ.

ಕಪ್ಪುಹಣದ ತೌರಾದ ಸಮಾಂತರ ಅರ್ಥವ್ಯವಸ್ಥೆಯ ಬೆಳವಣಿಗೆಗೆ ನಿಯಂತ್ರಣ ಮತ್ತು ಲೈಸೆನ್ಸ್ ನೀಡಿಕೆ ಪದ್ಧತಿಯೇ ಮುಖ್ಯ ಕಾರಣವೆಂದು ತಿಳಿದುಬಂದಿದೆ. ನಿಯಂತ್ರಣ ಕಾನೂನುಗಳು ಜಾರಿಗೆ ಬಂದಂತೆಲ್ಲ ಕಾಳಸಂತೆ ಮತ್ತು ಭ್ರಷ್ಟಾಚಾರಗಳು ಬಲಗೊಳ್ಳುತ್ತವೆ. ಎಲ್ಲ ರೀತಿಯ ಸಟ್ಟಾ ವ್ಯಾಪಾರ ವ್ಯವಹಾರಗಳಿಗೆ ಕಪ್ಪುಹಣವೇ ಮೂಲಾ

ಧಾರವಾಗುತ್ತದೆ. ಅತ್ಯಾಧುನಿಕ ರೀತಿಯ ಬಂಗಲೆಗಳ ನಿರ್ಮಾಣ, ವೈಭವೋಪೇತ ಅನುಭೋಗ ಸಾಮಗ್ರಿಗಳನ್ನು ಕೊಳ್ಳುವುದು, ಮದುವೆ-ಮುಂಜಿಗಳಿಗೆ ಲೆಕ್ಕವಿಲ್ಲದೆ ವೆಚ್ಚ ಮಾಡುವುದು—ಇತ್ಯಾದಿ ಪ್ರದರ್ಶನಾತ್ಮಕ ಪರಿಣಾಮ ಹೊಂದಿರುವ ವೆಚ್ಚಗಳಿಗೆ ನಗದಾಗಿ ಬಚ್ಚಿಟ್ಟುಕೊಂಡ ಹಣ ವ್ಯಯವಾಗುತ್ತದೆ. ಇಂಥ ದುಂದು ವೆಚ್ಚಗಳ ಪರಿಣಾಮ ವಾಗಿ ರಾಷ್ಟ್ರೀಯ ವರಮಾನದ ಒಂದು ಭಾಗ ಜನ ಸಾಮಾನ್ಯರ ಅನುಭೋಗಕ್ಕೆ ನಿಲುಕದ ವಸ್ತುಗಳ ಉತ್ಪಾದನೆಗೆ ವಿನಿಯೋಗವಾಗುವುದರಿಂದ ದೇಶದ ಅರ್ಥವ್ಯವಸ್ಥೆ ಅಸ್ಥಿರಗೊಳ್ಳುತ್ತದೆ.

ವ್ಯಂಗ್ಯವಾಗಿ, ಕಪ್ಪುಹಣವನ್ನು ಆಪದ್ಬಾಂಧವ ಎನ್ನುವುದುಂಟು. ಈ ಹಣದಿಂದಲೇ ನಿರ್ಮಾಣವಾದ ಗಗನಚುಂಬಿ ಕಟ್ಟಡಗಳನ್ನು ನಮ್ಮ ರಾಷ್ಟ್ರೀಯ ಆಸ್ತಿಯ ಆಧುನೀಕರಣದ ಪ್ರತೀಕ ಎಂದು ಎದೆ ತಟ್ಟಿಕೊಳ್ಳುತ್ತೇವೆ. ಇಂಥ ಬೃಹತ್ ಕಟ್ಟಡಗಳ ನಿರ್ಮಾಣದಿಂದ ಸಿಮೆಂಟ್, ಇಟ್ಟಿಗೆ ಮುಂತಾದ ಅನೇಕ ಕೈಗಾರಿಕೆಗಳು ತಲೆ ಎತ್ತಿರುವುದು ದಿಟ. ಆದರೆ ಇದೇ ಹಣವನ್ನು ಸಮಾಜದ ದುರ್ಬಲ ವರ್ಗದವರಿಗೆ ಒಂದು ಕನಿಷ್ಠ ದರ್ಜೆಯ ಸೂರು ನಿರ್ಮಿಸಿಕೊಡುವುದಕ್ಕೆ ವಿನಿಯೋಗಿಸಿದ್ದ ಪಕ್ಷದಲ್ಲಿ ಕಳ್ಳರಿಂದಲೂ ಪ್ರಯೋಜನವಾದಂತಾಗುತ್ತಿತ್ತು, ಸಾಮಾಜಿಕ ಹಿತಸಾಧನೆಯಾದಂತಾಗುತ್ತಿತ್ತು. ಹೀಗೆ ಕಪ್ಪುಹಣದಿಂದ ಹಲವಾರು ಕೈಗಾರಿಕೆಗಳು ಮತ್ತು ಅನೇಕ ಆರ್ಥಿಕ ಚಟುವಟಿಕೆಗಳು ಉತ್ತೇಜಿತಗೊಳ್ಳುವುವಾದರೂ ಸಮಾಂತರ ಅರ್ಥವ್ಯವಸ್ಥೆಯ ಮೂಲಕ ಹೆಚ್ಚು ಹೆಚ್ಚು ಹಣ ಹರಿದು ಬರುವುದರಿಂದಾಗಿ ಹಣದುಬ್ಬರ ತೀವ್ರವಾಗುತ್ತದೆ. ಈ ದೃಷ್ಟಿಯಿಂದ ನೋಡಿದಾಗ ಕೊರತೆ ತುಂಬುವ ಹಣಕ್ಕೂ ಕಪ್ಪು ಹಣಕ್ಕೂ ಹೆಚ್ಚೇನೂ ವ್ಯತ್ಯಾಸ ಕಂಡುಬರುವುದಿಲ್ಲ. ಎರಡರ ಪರಿಣಾಮವೂ ಒಂದೇ—ಹಣದುಬ್ಬರವನ್ನು ಸೃಷ್ಟಿಸುವುದು.

ಬಹಳ ವರ್ಷಗಳ ಹಿಂದೆ ನಮ್ಮ ದೇಶದ ತೆರಿಗೆಯ ರಚನೆಯನ್ನು ಪರಿಶೀಲಿಸಿ ವರದಿ ಮಾಡಿದ ಪ್ರೊ|| ನಿಕೋಲಾಸ್ ಕಾಲ್ಡರ್‌ರ ದೃಷ್ಟಿಯಲ್ಲಿ ತೆರಿಗೆಯ ದರ ಹೆಚ್ಚಾಗಿ ಇರುವುದು ಕಪ್ಪುಹಣ ವೃದ್ಧಿಯಾಗುವುದಕ್ಕೆ ಕಾರಣವಾಗುತ್ತದೆ. ಅವರ ಲೆಕ್ಕಾಚಾರದಂತೆ ವರಮಾನ ತೆರಿಗೆಯ ದರ ಹೆಚ್ಚಿದ್ದಾಗ ತೆರಿಗೆ ತಪ್ಪಿಸಿಕೊಳ್ಳುವ ಪ್ರತಿ ರೂಪಾಯಿಯೂ ತೆರಿಗೆದಾರನಿಗೆ 80ರಿಂದ 90 ಪೈಸೆಗಳಷ್ಟು ಹೆಚ್ಚು ಆದಾಯ ತರುತ್ತದೆ. ವಾಂಛೂ ಸಮಿತಿಯೂ ತನ್ನ ಅಂತಿಮ ವರದಿಯಲ್ಲಿ ತೆರಿಗೆಗಳ್ಳತನಕ್ಕೆ ತೆರಿಗೆಯ ದರ ಹೆಚ್ಚಾಗಿರುವುದೇ ಅತಿ ಮುಖ್ಯವಾದ ಕಾರಣ ಎಂದು ಅಭಿಪ್ರಾಯಪಟ್ಟಿದೆ. ಆದಾಗ್ಯೂ ಇಂದು ಕಪ್ಪುಹಣ ಕಾಳಸಂತೆಕೋರ ಶ್ರೀಮಂತ ವರ್ಗದವರ ಗುಪ್ತ ತಿಜೋರಿಯಲ್ಲಷ್ಟೇ ಉಳಿದುಕೊಂಡಿಲ್ಲ. ಕಾಲ್ಡರ್ ಸಲಹೆ ನೀಡಿ ಬಹಳ ವರ್ಷಗಳು ಕಳೆದಿವೆ. ಸಮಾಂತರ ಅರ್ಥ ವ್ಯವಸ್ಥೆಯಿಂದ ಕೋಟಿಗಟ್ಟಲೆ ಹಣ ಹೊರಗೆ ಹರಿದು ಬಂದಿದೆ—ಅರ್ಥವ್ಯವಸ್ಥೆಯ ಶಾಖೆ ಶಾಖೆಗಳಿಗೆ ವ್ಯಾಪಿಸಿಕೊಂಡಿದೆ. ಕಪ್ಪುಹಣ ಸೃಷ್ಟಿಯಾಗುವುದಕ್ಕೂ ತೆರಿಗೆಯ ದರ ಅಧಿಕವಾಗಿರುವುದಕ್ಕೂ ಸಂಬಂಧ ವಿಲ್ಲ ಎಂದು ಕಂಡುಬಂದಿದೆ. ಇಂದು ಅನೇಕ ಸ್ವಯಂ ಉದ್ಯೋಗಸ್ಥರೂ, ಸರ್ಕಾರಿ ನೌಕರರೂ, ವ್ಯಾಪಾರಿಗಳೂ 'ಎರಡನೆಯ ಖಾತೆ' ಹೊಂದಿರುವುದನ್ನು ಕಾಣಬಹುದು. ಇದರ ಉದ್ದೇಶ ಅಧಿಕ ತೆರಿಗೆಯ ದರದಿಂದ ತಪ್ಪಿಸಿಕೊಳ್ಳುವುದಲ್ಲ; ತೆರಿಗೆಯಿಂದಲೇ ಮುಕ್ತವಾಗುವುದೇ ಆಗಿದೆ.

ತೆರಿಗೆಯ ದರ ಹೆಚ್ಚಾಗಿರಲಿ ಅಥವಾ ಕಡಿಮೆ ಇರಲಿ ಅಕ್ರಮವಾಗಿ ಗಳಿಸಿದ ವರಮಾನಗಳ ಮೇಲೆ ತೆರಿಗೆ ತೆರಲು ಬರುವುದಿಲ್ಲ. ಆದ್ದರಿಂದ, ತೆರಿಗೆಯ ದರಗಳು ಹೆಚ್ಚಾಗುವುದರಿಂದ, ಕಪ್ಪುಹಣ ವೃದ್ಧಿಯಾಗುತ್ತದೆ ಎನ್ನುವುದಕ್ಕಿಂತಲೂ ಕಪ್ಪುಹಣ ವೃದ್ಧಿಯಾಗುವುದರಿಂದ ತೆರಿಗೆಯ ದರಗಳು ಹೆಚ್ಚಾಗುತ್ತವೆ ಎಂದು ಹೇಳಬಹುದು. ತೆರಿಗೆಯೇ ಇಲ್ಲದಿದ್ದರೂ ಕಪ್ಪುಹಣ ಸೃಷ್ಟಿಯ ಚಟುವಟಿಕೆಗಳು ಮುಂದುವರಿಯುತ್ತವೆ. ಕಾರಣ ಅದನ್ನು ಲೆಕ್ಕಕ್ಕೆ ಒಳಪಡಿಸಲಾಗದಿರುವುದು. ಒಟ್ಟಿನಲ್ಲಿ ಕಾಳಸಂತೆ ವ್ಯವಹಾರಗಳು, ಕಳ್ಳಸಾಗಾಣಿಕೆ, ಸ್ಥಿರ ಹಾಗೂ ಚರ ಆಸ್ತಿಗಳಿಗೆ ಸಂಬಂಧಿಸಿದ ಬೇನಾಮಿ ವ್ಯವಹಾರಗಳು, ಲಾಭಕೋರತನ, ಕಳ್ಳದಾಸ್ತಾನು, ಇತ್ಯಾದಿ ದುಷ್ಕೃತ್ಯಗಳಿಗೆ ಕಪ್ಪುಹಣವೇ ಮೂಲಾಧಾರ ಎಂಬುದು ನಿರ್ವಿವಾದವಾದ ಸಂಗತಿ. ಒಂದು ಪಕ್ಷ ಎಲ್ಲಾ ಮಟ್ಟಗಳಲ್ಲೂ ತೆರಿಗೆಯ ದರಗಳನ್ನು ತಗ್ಗಿಸುವುದಾದರೂ ಜನರು ಅನಾಯಾಸ ಸಂಪಾದನೆಗಾಗಿ ಮೇಲ್ಕಂಡ ಈ ವ್ಯವಹಾರಗಳಲ್ಲಿ ತೊಡಗುವುದಿಲ್ಲ ಎಂದು ಹೇಳಲಾಗುವುದಿಲ್ಲ.

ಇತ್ತೀಚೆಗೆ (1978 ಜನವರಿ 16) ಕೈಗೊಂಡ ಅಧಿಕ ಮಾನದ ನೋಟುಗಳ ಅನಾಣ್ಯೀಕರಣದಿಂದ ಕಪ್ಪುಹಣದ ವಿಪತ್ತುಗಳನ್ನು ತಡೆಗಟ್ಟುವ ಆವಶ್ಯಕತೆಯ ಅರಿವು ಮರುಕಳಿಸಿದೆ. ಈ ಸಂದರ್ಭದಲ್ಲಿ, ಚಲಾವಣೆಯಲ್ಲಿದ್ದ ಅಧಿಕ ಮಾನದ ನೋಟುಗಳ (ರೂ. 1,000, ರೂ. 5,000 ಮತ್ತು ರೂ. 10,000 ನೋಟುಗಳು) ಪ್ರಮಾಣ ಒಟ್ಟು ಹಣದ ಕೇವಲ ಸೇಕಡ ಎರಡರಷ್ಟಿತ್ತು ಎಂಬುದು ದಿಟ. ಆದರೆ ಇಂಥ ಕ್ರಮದಿಂದ ನೋಟುಗಳ ರೂಪದಲ್ಲಿ ಕಪ್ಪುಹಣ ಇಟ್ಟುಕೊಳ್ಳುವವರಿಗೆ ಒಂದು ರೀತಿಯ ಮಾನಸಿಕ ಆಘಾತ ಉಂಟಾಗುತ್ತದೆ ಎಂದು ಹೇಳಲಾಗಿದೆ. ಈ ಮಾನಸಿಕ ಬೆದರಿಕೆಯಿಂದ ಕಪ್ಪುಹಣ ಸೃಷ್ಟಿಯ ಮೇಲೆ ತೀವ್ರ ಪರಿಣಾಮ ಉಂಟಾಗುತ್ತದೆ ಎಂದು ವಾದಿಸಲಾಗಿದೆ. ಆದರೆ ಅನಾಣ್ಯೀಕರಣವು ಪದೇಪದೇ ಕೈಗೊಳ್ಳಬಹುದಾದ ಕ್ರಮವಲ್ಲ ಎಂಬುದು ಗಮನಿಸಬೇಕಾದ ಅಂಶ. ಒಮ್ಮೆ ಅನಾಣ್ಯೀಕರಣವನ್ನು ಕೈಗೊಂಡರೆ ಅನಂತರ ಹತ್ತಿರದ ಭವಿಷ್ಯದಲ್ಲಿ ಪುನಃ ಅದನ್ನು ಕೈಗೊಳ್ಳುವ ಸಾಧ್ಯತೆಗಳು ಕಡಿಮೆ ಇರುವುದರಿಂದ ಕಾಳಸಂತೆಕೋರರು ಚೇತರಿಸಿಕೊಳ್ಳಲು ಅವಕಾಶವಿರುತ್ತದೆ. ಒಟ್ಟಿನಲ್ಲಿ ಇತ್ತೀಚಿನ

ಅನಾಣ್ಯೀಕರಣದಿಂದ ಸಾಧಿಸಲಾದ್ದು ಅತ್ಯಲ್ಪ. ಅನಾಣ್ಯೀಕರಣ ಕ್ರಮದಿಂದ ಕಪ್ಪುಹಣದ ಮೂಲಗಳನ್ನು ತೊಡೆದು ಹಾಕಲಾಗುವುದಿಲ್ಲ. ಕಡಿಮೆ ಮಾನದ ನೋಟುಗಳಲ್ಲಿ ಇದ್ದಿರಬಹುದಾದ ಕಪ್ಪುಹಣ ಹಾಗೆಯೇ ಉಳಿದುಕೊಳ್ಳುತ್ತದೆ. ಸರ್ಕಾರ ಕಡಿಮೆ ಮಾನದ ನೋಟುಗಳನ್ನು ಅನಾಣ್ಯೀಕರಿಸಲು ಯಾವ ಅಡ್ಡಿಯೂ ಇರದಿದ್ದರೂ, ಭಾರತದಂಥ ಅರ್ಥವ್ಯವಸ್ಥೆಯಲ್ಲಿ ಈ ಕೆಲಸ ಕಷ್ಟವಾಗುತ್ತದೆ. ಅನೇಕ ದಿನಗಳವರೆಗೆ ಅರ್ಥವ್ಯವಸ್ಥೆ ಹಿಡಿತ ತಪ್ಪುತ್ತದೆ.

ಕಪ್ಪುಹಣದ ಸೃಷ್ಟಿಯನ್ನು ನಿಯಂತ್ರಿಸಲು ಮತ್ತು ಅದನ್ನು ಹೊರಗೆಳೆಯಲು ಇರುವ ಯಾವುದೇ ಕ್ರಮವಾಗಲಿ ಅದನ್ನು ಕೈಗೊಳ್ಳುವುದರಲ್ಲಿ ಅನೇಕ ರೀತಿಯ ಸಮಸ್ಯೆಗಳು ಎದುರಾಗುತ್ತವೆ. ಉದಾಹರಣೆಗಾಗಿ, ಒಂದು ಗೊತ್ತಾದ ಮೊತ್ತಕ್ಕೆ ಮೀರಿದ ನಗದು ವ್ಯವಹಾರಗಳನ್ನು ತಡೆಗಟ್ಟುವ ಕ್ರಮವನ್ನು ತೆಗೆದುಕೊಂಡರೆ, ಭಾರತದಲ್ಲಿ ಸೇಕಡ 50ರಷ್ಟು ವ್ಯವಹಾರಗಳು ಜನಸಾಮಾನ್ಯರು ಕೈಗೊಳ್ಳುವ ಸಣ್ಣಪುಟ್ಟ ವ್ಯವಹಾರಗಳಾಗಿರುತ್ತವೆ. ಈ ಕ್ರಮದಿಂದ ಜನಸಾಮಾನ್ಯರು ಇಲ್ಲಸಲ್ಲದ ತೊಂದರೆಗಳನ್ನು ಅನುಭವಿಸಬೇಕಾಗುತ್ತದೆ. ಅಜ್ಞಾನ ಅನಕ್ಷರತೆಗಳಿಂದ ಕೂಡಿರುವ ಗ್ರಾಮೀಣ ಸಮುದಾಯಗಳು ಅನೇಕ ರೀತಿಯ ತೊಡಕುಗಳಿಗೆ ತುತ್ತಾಗುವರು. ಅಧಿಕ ಮೊತ್ತದ ನಗದು ವ್ಯವಹಾರ ನಡೆಸುವವರಿಗಾದರೂ, ಕಾನೂನಿನ ಕಣ್ಣು ತಪ್ಪಿಸಿಕೊಳ್ಳಲು ಹಲವಾರು ದಾರಿಗಳಿರುತ್ತವೆ. ವ್ಯಕ್ತಿಗಳು ಚಿನ್ನ, ಒಡವೆ, ಭೂಮಿ ಮತ್ತು ಇತರ ಬೆಲೆಬಾಳುವ ವಸ್ತುಗಳನ್ನು ಹೊಂದಿರುವುದರ ಮೇಲೆ ಮಿತಿ ವಿಧಿಸುವ ಕ್ರಮ ಕೈಗೊಳ್ಳಬಹುದಾದರೂ ಇದನ್ನು ಕಾರ್ಯರೂಪಕ್ಕೆ ತರುವಲ್ಲಿ ಅನೇಕ ರೀತಿಯ ತೊಡಕುಗಳನ್ನು ಎದುರಿಸಬೇಕಾಗುತ್ತದೆ.

ಅಕ್ರಮ ಸಂಪಾದನೆಯನ್ನು ತಡೆಗಟ್ಟುವ ನಿಟ್ಟಿನಲ್ಲಿ, ಅನಾವಶ್ಯಕ ನಿಯಂತ್ರಣಗಳನ್ನು ತೆಗೆದುಹಾಕುವುದು, ಪೂರೈಕೆ ಮತ್ತು ಬೇಡಿಕೆ ಸ್ಥಿತಿಗತಿಗಳಲ್ಲಿನ ಅಸ್ಪಷ್ಟತೆಯನ್ನು ನಿವಾರಿಸುವುದು, ಹೆಚ್ಚದ ತೆರಿಗೆಯನ್ನು ವಿಧಿಸುವುದು ಇವೇ ಮೊದಲಾದ ಕ್ರಮಗಳ ಬಗ್ಗೆ ಈ ವರೆಗೆ ಸಾಕಷ್ಟು ಚರ್ಚೆ ನಡೆದಿದೆ. ಅತಿ ದೀರ್ಘಾವಧಿಯ ಅಥವಾ ಆಚರಣೆಗೆ ತರಲು ಕಷ್ಟವಾಗುವ ಈ ಕ್ರಮಗಳಿಂದ ಹೆಚ್ಚು ಪ್ರಯೋಜನ ವಿಲ್ಲ ಎಂದು ತಿಳಿದುಬಂದಿದೆ. ಅಲ್ಲದೆ ಇಂತಹ ಯಾವುದೇ ಕ್ರಮವಾಗಲಿ ಕಪ್ಪುಹಣದ ಬೆಳವಣಿಗೆಯನ್ನು ಕುಗ್ಗಿಸುವುದರ ಜೊತೆಗೆ ಅದು ದೇಶದ ಆರ್ಥಿಕಾಭಿವೃದ್ಧಿ ನೀತಿ ನಿಯಮಗಳಿಗೆ ತೊಡಕಾಗದಂತಿರಬೇಕಾಗುತ್ತದೆ.

ಒಟ್ಟಿನಲ್ಲಿ ಕಪ್ಪುಹಣದ ವೃದ್ಧಿಯಾಗುವುದರಿಂದ ಉಂಟಾಗುವ ಕೆಡುಕುಗಳನ್ನು ಸರಕಾರ ಗುರುತಿಸಿದೆಯಾದರೂ ಅದನ್ನು ತಡೆಗಟ್ಟಲು ಇದುವರೆಗೆ ಪರಿಣಾಮಕಾರಿಯಾದ ಯಾವ ಕ್ರಮವನ್ನೂ ಕೈಕೊಂಡಿಲ್ಲವೆಂದೇ ಹೇಳಬೇಕಾಗುತ್ತದೆ. ದಿವಂಗತ ನೆಹರು ಅವರೊಮ್ಮೆ 'ಕಾಳಸಂತೆಕೋರರನ್ನು ಅತಿ ಹತ್ತಿರದ ಕಂಬಕ್ಕೆ ನೇಣುಹಾಕಬೇಕು' ಎಂದು ಹೇಳಿದ್ದುಂಟು. ಆದರೆ ನೇಣು ಹಾಕುವುದಿರಲಿ ನಿಯಂತ್ರಿಸುವ ಕಾರ್ಯವಾದರೂ ಸಮರ್ಪಕವಾಗಿ ನಡೆದಿಲ್ಲ ಎಂದು ಹೇಳಬೇಕಾಗಿದೆ. ಸಧ್ಯದ ಸರಕಾರವಾದರೂ 'ಎರಡನೆಯ ಖಾತೆ' ತೆರೆಯುವ ದುರಭ್ಯಾಸವನ್ನು ತಪ್ಪಿಸುವ ಪ್ರಜಾಸತ್ತಾತ್ಮಕವಾದ ಒಂದು ವಿಧಾನವನ್ನು ರೂಪಿಸಿದ್ದಾದರೆ ರಾಷ್ಟ್ರದ ಅರ್ಥವ್ಯವಸ್ಥೆ ಒಂದು ದೊಡ್ಡ ಗಂಡಾಂತರದಿಂದ ಪಾರಾಗುವುದಕ್ಕೆ ದಾರಿ ಮಾಡಿಕೊಟ್ಟಂತಾಗುತ್ತದೆ.

ಹಣದುಬ್ಬರವನ್ನು ತಡೆಗಟ್ಟುವ ಕ್ರಮವಾಗಿ ಅಣಿಗೊಂಡ 'ನೆಮಿಬೊಂಬ್ಲ' ತಂತ್ರದ ಯುಕ್ತಾಯುಕ್ತತೆಯನ್ನು ಕುರಿತು ಸಿ. ಎನ್. ವಕೀಲ್ ಮೊದಲಾದವರು ನೀಡಿರುವ ಹೇಳಿಕೆಯಲ್ಲಿ ಮೂಡಿರುವ ಅಭಿಪ್ರಾಯ ನೂರರಷ್ಟು ದಿಟವಾದುದು. ಉತ್ಪಾದಕರು, ಮಧ್ಯವರ್ತಿಗಳು, ಮತ್ತು ಅಧಿಕಾರ-ಅಂತಸ್ತುಗಳನ್ನು ಹೊಂದಿರುವ ರಾಜಕಾರಣಿಗಳಿಗೆ ಕಪ್ಪುಹಣದ ಸುಗ್ಗಿ ಪ್ರಾಪ್ತವಾಗುತ್ತದೆ. ಇದರ ಅಂತಿಮ ಪರಿಣಾಮವಾಗಿ ಯಾವುದೇ ರೀತಿಯ ಪ್ರಾಮಾಣಿಕತೆಯೂ ಇರದ, ಅಭಾವ, ಆರ್ಥಿಕತೆಯನ್ನು ಶಾಶ್ವತಗೊಳಿಸಲೆತ್ನಿಸುವ ಮತ್ತು ಛಿದ್ರಕಾರಕ ನೀತಿನಿಯಮಗಳನ್ನು ರೂಪಿಸುವ ಪಟ್ಟಭದ್ರ ಹಿತಾರ್ಥಿಗಳ ಪ್ರಭುತ್ವ ಸ್ಥಾಪನೆಯಾಗುತ್ತದೆ. ಸಾರ್ವಜನಿಕ ಪ್ರಾಮಾಣಿಕತೆಯನ್ನು ಸಾಧಿಸದಿದ್ದರೆ ಕಪ್ಪುಹಣದಂಥ ಅನಿಷ್ಟವನ್ನು ತೊಲಗಿಸಲು ಸರ್ಕಾರ ಕೈಗೊಳ್ಳುವ ಯಾವುದೇ ಕ್ರಮ ಊರ್ಜಿತವಾಗುವುದಿಲ್ಲ. ಇದು ಸಾಧ್ಯವಾಗಬೇಕಾದರೆ ಸರ್ಕಾರದ ಆಡಳಿತ ಸ್ವಚ್ಛವಾಗಬೇಕು. ಭ್ರಷ್ಟ ಅಧಿಕಾರಿಗಳ ವಿರುದ್ಧ ಸರಕಾರ ಮುಲಾಜಿಲ್ಲದ ಕ್ರಮ ಕೈಗೊಳ್ಳಬೇಕು. ಅಕ್ರಮ ವ್ಯವಹಾರಗಳಲ್ಲಿ ತೊಡಗಿರುವರೆಂದು ಗೊತ್ತಾದ ವ್ಯಕ್ತಿಗಳನ್ನು ಇತರರಿಗೆ ಎಚ್ಚರಿಕೆ ಉಂಟಾಗುವಂತೆ ಉಗ್ರ ಶಿಕ್ಷೆಗೆ ಒಳಪಡಿಸಬೇಕು.

ಅಭಿವೃದ್ಧಿಶೀಲ ರಾಷ್ಟ್ರದವರಾಗಿ ನಮಗಿನ್ನೂ ಕಪ್ಪುಹಣದ ಕರಾಳ ಪರಿಣಾಮಗಳು ಸಂಪೂರ್ಣವಾಗಿ ಅರಿವಾಗಿಲ್ಲ. ಇವನ್ನು ನಿರ್ಮೂಲಗೊಳಿಸುವ ರಾಷ್ಟ್ರೀಯ ನೀತಿಯೊಂದು ಇನ್ನೂ ರೂಪುಗೊಳ್ಳಬೇಕಾಗಿದೆ. ದಿಢೀರ್ ಶ್ರೀಮಂತಿಕೆಯ ತಂತ್ರ ಕುತಂತ್ರಗಳನ್ನು ಹತೋಟಿಯಲ್ಲಿ ಇಡುವುದಕ್ಕೆ ಸಹಾಯಕವಾಗಿ ಸಮಾಜದಲ್ಲಿ ಮೌಲ್ಯ ವಿನ್ಯಾಸ ನೆಲೆಗೊಳ್ಳಬೇಕಾಗಿದೆ. ಹಣದಿಂದ ದೊರಕಬಹುದಾದ ನೀಚ ಆಡಂಬರಕ್ಕೆ ಮರುಳಾಗಿ ಜನರು ಹೆಚ್ಚು ಸಂಪಾದಿಸಲು ಸಲ್ಲದ ವಿಧಾನಗಳನ್ನು ಅನುಸರಿಸುತ್ತಾರೆ. ವ್ಯಕ್ತಿಯ ದೃಷ್ಟಿಯಾದರೂ ಅವನ ಸಂಸಾರಿಕ ಸುಖಕ್ಕಷ್ಟೇ ಮಿತಿಗೊಳ್ಳುತ್ತದೆ. ಹೀಗಾಗಿ ರಾಷ್ಟ್ರಹಿತ ಪರಭಾರೆಯಾಗುತ್ತದೆ. ಆದುದರಿಂದ ಕಪ್ಪುಹಣ ಸೃಷ್ಟಿ ಮಿತಿಮೀರಿ ಇಡೀ ರಾಷ್ಟ್ರವನ್ನು ನಿಶ್ಚೇತನಗೊಳಿಸುವ ಮೊದಲು ಇವರ ಮೂಲಕ್ಕೆ ಕೊಡಲಿ ಇಡುವಂಥ ಪರಿಣಾಮಕಾರಿಯಾದ ಹಾಗೂ ವ್ಯಾಪಕವಾದ ನಿಯಮಾವಳಿಯನ್ನು ರೂಪಿಸಿಕೊಳ್ಳುವುದು ಅತ್ಯಂತ ಆವಶ್ಯಕವಾಗಿದೆ.

ಶ್ರೀಲಂಕಾ ಸರಕಾರ ಕಪ್ಪುಹಣವನ್ನು ಹೊರಗೆಳೆಯುವ ಕ್ರಮವಾಗಿ 5,000 ರೂಪಾಯಿಗಳ ಮೌಲ್ಯದ ವಾಹಕ ಬಾಂಡುಗಳನ್ನು (ಬೇರರ್ ಬಾಂಡ್ಸ್) ಹೊರಡಿಸಿದೆ. ಐದು ವರ್ಷಗಳಲ್ಲಿ ಫಲಿಸುವ ಈ ಬಾಂಡುಗಳ ಮೇಲೆ ಸೇಕಡ 5ರಷ್ಟು ಬಡ್ಡಿಯನ್ನು ಕೊಡಲಾಗುತ್ತದೆ. ಸುಮಾರು 100 ಕೋಟಿ ರೂಪಾಯಿಗಳಷ್ಟು ಕಪ್ಪುಹಣ ಇದ್ದಿರಬಹುದೆಂಬ ಅಂದಾಜಿನ ಮೇಲೆ ಅಷ್ಟೇ ಮೊತ್ತದ ಬಾಂಡುಗಳನ್ನು ಹೊರಡಿಸಲಾಗಿದೆ. ಹಣ ಒಪ್ಪಿಸುವವರಿಗೆ ಅವರು ಒಪ್ಪಿಸಿದ ಹಣದ ಒಂದು ಗೊತ್ತಾದ ಸೇಕಡ ಪ್ರಮಾಣದ ಮೌಲ್ಯದಷ್ಟು ಬಾಂಡುಗಳನ್ನು ಕೊಡಲಾಗುತ್ತದೆ. (ಉದಾಹರಣೆಗಾಗಿ, 10.000 ರೂಪಾಯಿಗಳನ್ನು ಒಪ್ಪಿಸಿದವರಿಗೆ ಆದರ ಶೇಕಡ 60ರಷ್ಟು ಮೌಲ್ಯದ ಬಾಂಡುಗಳನ್ನು ಕೊಡಬಹುದು). ಬಾಂಡುಗಳನ್ನು ಒತ್ತೆಇಟ್ಟು ಹಣಪಡೆಯಬಹುದಾಗಿರುತ್ತದೆ. ವರಮಾನ ತೆರಿಗೆ ಕೊಡುವುದು ಮತ್ತು ಓವರ್ ಡ್ರಾಫ್ಟ್ ಸೌಲಭ್ಯಗಳನ್ನು ಪಡೆಯಲು ಬಾಂಡುಗಳನ್ನು ಆಧಾರವಾಗಿ ಬಳಸಿಕೊಳ್ಳಲು ಬರುತ್ತದೆ. ಹೀಗೆ ಕಪ್ಪುಹಣ ಉಳ್ಳವರು ಯಾವ ಭಯವೂ ಇಲ್ಲದೆ ಅದನ್ನು ಕಾನೂನುಬದ್ಧ ಹಣವಾಗಿ ಪರಿವರ್ತಿಸಿಕೊಳ್ಳಬಹುದಾಗಿರುತ್ತದೆ.

ಭಾರತ ಸರಕಾರವೂ ಶ್ರೀಲಂಕಾ ಮಾದರಿಯಲ್ಲಿ ಬಾಂಡುಗಳನ್ನು ಹೊರಡಿಸುವ ಕ್ರಮ ಕೈಗೊಳ್ಳಬಹುದು ಎಂಬುದು ತಜ್ಞರ ಸಲಹೆಯಾಗಿದೆ. ಬಾಂಡುಗಳು ಫಲಿಸುವ ಅವಧಿ 10 ವರ್ಷಗಳಾಗಿರಬೇಕೆಂದೂ, ಬಾಂಡುಗಳ ಮೇಲೆ ಕೊನೆಯ 7 ವರ್ಷಗಳಲ್ಲಿ ಸೇಕಡ 6ರಷ್ಟು ಬಡ್ಡಿ ಕೊಡಬೇಕೆಂದೂ, ಹಣ ಒಪ್ಪಿಸುವವರಿಗೆ ಅವರ ಹಣದ ಸೇಕಡ 60ರಷ್ಟು ಮೌಲ್ಯದ ಬಾಂಡುಗಳನ್ನು ನೀಡಬೇಕೆಂದೂ ಸೂಚಿಸಲಾಗಿದೆ. ಆದರೆ ಸದ್ಯದ ಸರಕಾರವು ಈ ಕ್ರಮವನ್ನು ಕೈಗೆತ್ತಿಕೊಂಡೀತೆ ಎಂಬ ಸಂಶಯ ವ್ಯಕ್ತವಾಗಿದೆ. ಕಪ್ಪುಹಣ ಸಂಪಾದಿಸಿರುವವರು ಸ್ವಯಮೇವ ಅದನ್ನು ಬಹಿರಂಗಪಡಿಸಬಹುದೆಂಬುದಾಗಿ 1975ರ ಅಕ್ಟೋಬರ್ 8ರಂದು ಈ ಸರಕಾರ ಸಾರಿ ರೂ. 1,450 ಕೋಟಿಯಷ್ಟು ಕಪ್ಪುಹಣವನ್ನು ಹೊರಗೆಳೆದಿತ್ತು. ಈ ಒಂದು ಆಧಾರದ ಮೇಲೆ ಆಶಾವಾದಕ್ಕೆ ಅವಕಾಶವಿದೆ. ಈಗ ತಲೆತಿನ್ನುತ್ತಿರುವ ಇನ್ನೊಂದು ವಿಚಾರವೆಂದರೆ, ದೇಶದಲ್ಲಿ ಕಪ್ಪುಹಣ ಎಷ್ಟಿರಬಹುದು ಎಂಬುದು. ಸ್ಥೂಲ ಅಂದಾಜಿನಂತೆ ರೂ. 20,000 ಕೋಟಿಗೆ ಇದು ಕಡಿಮೆ ಇಲ್ಲ ಎಂದು ಹೇಳಲಾಗುತ್ತಿದೆ. ಏನೇ ಇರಲಿ, ಸರ್ಕಾರ ಇನ್ನು ವಿಳಂಬಿಸಬಾರದು. ವಾಹಕ ಬಾಂಡುಗಳನ್ನು ಹೊರಡಿಸುವುದೋ ಅಥವಾ ಸಮಿಚೊಂಬ್ಳ ತಂತ್ರವನ್ನು ಇಂದಿನ ಪರಿಸ್ಥಿತಿಗೆ ತಕ್ಕಂತೆ ಪರಿಷ್ಕರಿಸಿಕೊಂಡು ಆಚರಣೆಗೆ ತರುವುದೋ—ಯಾವುದಾದರೂ ಒಂದು ಪರಿಣಾಮಕಾರಿಯಾದ ಕ್ರಮ ಕೈಗೊಂಡು ವಿಳಂಬದಿಂದ ಸಂಭವಿಸಬಹುದಾದ ಬಿಕ್ಕಟ್ಟಿನಿಂದ ರಾಷ್ಟ್ರವನ್ನು ಪಾರು ಮಾಡುವುದಕ್ಕೆ ಪ್ರಯತ್ನಿಸುವುದು ಸರ್ಕಾರದ ಆದ್ಯ ಕರ್ತವ್ಯವಾಗಿದೆ. ಕಪ್ಪುಹಣ ಹೊರಬರುವುದರಿಂದ ಸರ್ಕಾರಕ್ಕೆ ಲಾಭವಾಗುವುದು ಖಂಡಿತ. ಇದರಿಂದ ಆಯವ್ಯಯದ ಕೊರತೆಯನ್ನು ತುಂಬಿಕೊಳ್ಳಲು ಅನುಕೂಲವಾಗುವುದಲ್ಲದೆ ತೆರಿಗೆಯ ದರಗಳಲ್ಲೂ ರಿಯಾಯಿತಿ ತೋರಿಸಲು ಸಾಧ್ಯವಾಗುತ್ತದೆ. ಇವೆಲ್ಲವುಗಳ ಪರಿಣಾಮವಾಗಿ ಹಣದುಬ್ಬರ ಹತೋಟಿಗೆ ಬರುತ್ತದೆ.

# ಸವೆಸ್ಥಿ ತತ್ತ್ವ

---

**ಪ್ರೋ. ಕೃ. ಅನಂತಸ್ವಾಮಿ**

## ಉದ್ಯಮಗಳು ಯಶಸ್ವಿಯಾಗಿ ಕೆಲಸ ನಿರ್ವಹಿಸುತ್ತಿವೆಯೆ, ಅವು ಲಾಭಪ್ರದವಾಗಿವೆಯೆ ಎಂಬುದನ್ನರಿಯಲು ಒಂದು ಸರಳ ಸೂತ್ರ

ಹಲವು ಸಮಾಜಸೇವಾ ಸಂಸ್ಥೆಗಳು ಮತ್ತು ಸರ್ಕಾರಿ ಸಂಸ್ಥೆಗಳನ್ನು ಬಿಟ್ಟು ಮಿಕ್ಕ ಎಲ್ಲ ಉದ್ಯಮಗಳ ಮುಖ್ಯ ಧ್ಯೇಯವೆಂದರೆ ಲಾಭಗಳಿಕೆ. ಉದ್ಯಮ ಲಾಭಗಳಿಸುತ್ತಿದೆಯೋ ಅಥವಾ ನಷ್ಟ ಅನುಭವಿಸುತ್ತಿದೆಯೋ ಎಂಬ ಅರಿವು ಕಾಲಕಾಲಕ್ಕೆ ಉದ್ಯಮಿಗೆ ಮೂಡಬೇಕು. ಹೊಸ ಉದ್ಯಮವಾದಲ್ಲಿ, ಅದು ಯಾವ ದಿಸೆಯಲ್ಲಿ ಸಾಗುತ್ತಿದೆ ಎಂದು ಉದ್ಯಮಿ ಅಧ್ಯಯನ ಮಾಡಬೇಕು. ಬಂದ ಆದಾಯವೆಲ್ಲ ಲಾಭ ಅಥವಾ ಹೆಚ್ಚಳ ಎಂದುಕೊಂಡು ಯದ್ವಾತದ್ವಾ ಖರ್ಚು ಮಾಡುವ ಉದ್ಯಮಿಗಳು ಹೇರಳವಾಗಿದ್ದಾರೆ. ಶೀಘ್ರದಲ್ಲೇ ಅವರ ಉದ್ಯಮಗಳು ರೋಗಗ್ರಸ್ತವಾಗಿ ಅಂತ್ಯವಾಗುವುದಂತೂ ಖಚಿತ. ಲೆಕ್ಕಪತ್ರಗಳನ್ನು ಸರಿಯಾಗಿ ವ್ಯವಸ್ಥೆ ಮಾಡದಿದ್ದರೆ ಈ ಸಂಭವ ಹೆಚ್ಚು. ಸರಿಯಾಗಿ. ಕಾಲಕಾಲಕ್ಕೆ ಬರೆದ ಲೆಕ್ಕಪತ್ರಗಳಿಲ್ಲದಿದ್ದಲ್ಲಿ ಯಾವುದೇ ದಿವಸ ಉದ್ಯಮದ ಹಣಕಾಸು ಸ್ಥಿತಿ ಯಾವ ರೀತಿ ಇದೆಯೆಂದು ಹೇಳಲಿಕ್ಕೆ ಬರುವುದಿಲ್ಲ. ಆದಾಯ ಖರ್ಚುಗಳಿಗೆ ಸಂಬಂಧಿಸಿದ ಲೆಕ್ಕವನ್ನು ದಿನನಿತ್ಯ ಬರೆದಿಡುವುದು ಲೇಸು. ಪ್ರತಿ ತಿಂಗಳೂ ಲೆಕ್ಕಪತ್ರಗಳನ್ನು ಪರಿಶೀಲಿಸಿ, ಹಣಕಾಸಿನ ಸ್ಥಿತಿಯನ್ನು ನಿರೂಪಿಸುವ ಲೇಣೆ-ದೇಣೆ ಪಟ್ಟಿಯನ್ನು ತಯಾರಿಸಿ ಅಭ್ಯಸಿಸುವುದು ಉದ್ಯಮದ ಹಿತದೃಷ್ಟಿಯಿಂದ ಸೂಕ್ತ. ವ್ಯವಹಾರದಲ್ಲಿ ಲಾಭ ಬರುತ್ತಿದೆಯೋ ನಷ್ಟವಾಗುತ್ತಿದೆಯೋ ಎಂಬ ಸೂಚನೆ ಆಗ ಸಕಾಲಕ್ಕೆ ದೊರೆತು, ಆಡಳಿತ/ವ್ಯವಹಾರ ವೈಖರಿಯಲ್ಲಿ ಏನಾದರೂ ಬದಲಾವಣೆ ಮಾಡಬೇಕು ಎಂದು ಅನಿಸಿದಲ್ಲಿ ಆ ಬದಲಾವಣೆಯನ್ನು ಕ್ಷಿಪ್ರವಾಗಿ ಜಾರಿಗೆ ತರಬೇಕು. ಒಟ್ಟಿನಲ್ಲಿ, ಉದ್ಯಮ ಯಾವ ದಿಕ್ಕಿನಲ್ಲಿ ಸಾಗುತ್ತಿದೆ ಎಂಬ ಅರಿವು ಪ್ರತಿಯೊಬ್ಬ ಉದ್ಯಮಿಗೂ ಇರಬೇಕು.

ಉದ್ಯಮದ—ಪ್ರಗತಿಯ ಒಂದು ಮುನ್ನೋಟವನ್ನು ಹೊಂದಲು 'ಸವೆಸ್ಥಿ' ವಿಶ್ಲೇಷಣೆ ಸಹಾಯಮಾಡುತ್ತದೆ. [Break-even ಎಂಬ ಆಂಗ್ಲ ಪ್ರಯೋಗವನ್ನು ಸಮಾದಾಯ-ವೆಚ್ಚ-ಖರ್ಚು-ಸ್ಥಿತಿ (ಸವೆಸ್ಥಿ) ಎಂದು ಕನ್ನಡಿಸಲಾಗಿದೆ]. ಉತ್ಪಾದನೆ ಇರಲಿ, ಇಲ್ಲದಿರಲಿ, ಉದ್ಯಮ ಕೆಲವು ಕನಿಷ್ಠ ಖರ್ಚುಗಳನ್ನು ಭರಿಸಲೇ ಬೇಕು. ಸಿಬ್ಬಂದಿಯ ವೇತನ, ಕಟ್ಟಡದ ಬಾಡಿಗೆ, ನೀರು ದೀಪಗಳ ಖರ್ಚು, ಯಂತ್ರ ಮತ್ತಿತರ ಆಸ್ತಿಯ ಮೇಲಿನ ವಿಮೆಯ ಖರ್ಚು ಮುಂತಾದವು ಈ ರೀತಿಯ ಕನಿಷ್ಠ ಖರ್ಚುಗಳು. ಈ ವೆಚ್ಚಗಳನ್ನು ಅನಿವಾರ್ಯ ವೆಚ್ಚಗಳೆಂದು ಕರೆಯಬಹುದು. ಉತ್ಪಾದನೆಯಿರುವಾಗ, ಉತ್ಪಾದನೆಯ ಮಟ್ಟವನ್ನು ಆಧರಿಸಿ ವ್ಯತ್ಯಾಸವಾಗುವ ಖರ್ಚುಗಳು ಹಲವಾರಿರುತ್ತವೆ. ಕಚ್ಚಾ ವಸ್ತುವಿನ ಮೇಲಿನ ಖರ್ಚು, ಯಂತ್ರಗಳನ್ನು ಚಾಲನೆ ಮಾಡಲು ಬೇಕಾದ ವಿದ್ಯುಚ್ಛಕ್ತಿಯ ಖರ್ಚು, ಇತ್ಯಾದಿಗಳು ಉತ್ಪಾದನೆಯ ಮಟ್ಟವನ್ನು ನೇರವಾಗಿ ಅವಲಂಬಿಸಿರುತ್ತವೆ. ಉತ್ಪಾದನೆ ಹೆಚ್ಚಾದರೆ ಆ ಖರ್ಚುಗಳು ಹೆಚ್ಚಾಗುತ್ತವೆ. ಉತ್ಪಾದನೆ ಕಡಿಮೆಯಾದರೆ ಆ ಖರ್ಚುಗಳು ಕಡಿಮೆಯಾಗುತ್ತವೆ. ಅವುಗಳನ್ನು ಉತ್ಪಾದನಾಧಾರಿತ ಖರ್ಚುಗಳು ಎನ್ನಬಹುದು. ಆದ್ದರಿಂದ, ಒಂದು ಉದ್ಯಮದ ಒಟ್ಟಾರೆ ಖರ್ಚು ಅದರ ಅನಿವಾರ್ಯ ಖರ್ಚು ಮತ್ತು ಉತ್ಪಾದನಾಧಾರಿತ ಖರ್ಚುಗಳನ್ನೊಳಗೊಂಡಿರುತ್ತದೆ.

ಉದ್ಯಮಕ್ಕೆ ಆದಾಯ ಮೂಲತಃ ಉತ್ಪನ್ನಗಳ ಮಾರಾಟದಿಂದ ಒದಗುತ್ತದೆ.

ಸವೆಸ್ಥಿ ಮಟ್ಟದಲ್ಲಿ ಸಲ್ಲತಕ್ಕ ಆದಾಯವು ಉದ್ಯಮದ ಒಟ್ಟು ವೆಚ್ಚಕ್ಕೆ ಸಮನಾಗಿರುತ್ತದೆ. ಅಂಥ ಸ್ಥಿತಿಯಲ್ಲಿ ಉದ್ಯಮಕ್ಕೆ ಲಾಭವಾಗಲಿ ನಷ್ಟವಾಗಲಿ ಸಂಭವಿಸುವುದಿಲ್ಲ. ಈ ಕೆಳಗಿನ ಚಿತ್ರದಿಂದ ಸವೆಸ್ಥಿ ತತ್ವವನ್ನು ಅರ್ಥಮಾಡಿಕೊಳ್ಳಲು ಅನುಕೂಲವಾಗುವುದು.



ಉತ್ಪಾದನೆಯ ಹೆಚ್ಚಳವಾದಂತೆಲ್ಲ ಆದಾಯವೂ ಹೆಚ್ಚುತ್ತ ಹೋಗುತ್ತದೆ. (ಉತ್ಪನ್ನವೆಲ್ಲ ಮಾರಾಟವಾಗುತ್ತದೆಂದು ಭಾವಿಸೋಣ). ಈ ತತ್ವವನ್ನು ಆದಾಯ ರೇಖೆ ನಿರೂಪಿಸುತ್ತದೆ. ಒಟ್ಟು ಖರ್ಚು ರೇಖೆ 0 ಯಿಂದ (ಮೂಲದಿಂದ) ಪ್ರಾರಂಭವಾಗುವುದಿಲ್ಲ. ಏಕೆಂದರೆ, ಶೂನ್ಯ ಉತ್ಪಾದನ ಮಟ್ಟದಲ್ಲಿ ಅನಿವಾರ್ಯಖರ್ಚು ಇದ್ದೇ ಇರುತ್ತದೆ (ಅ.ಖ. ರೇಖೆ). ಉತ್ಪಾದನಾಧಾರಿತ ಖರ್ಚು ರೇಖೆ (ಉ.ಖ ರೇಖೆ) ಮೂಲದಲ್ಲಿ ಪ್ರಾರಂಭವಾಗಿ ಬೆಳೆಯುತ್ತ ಹೋಗುತ್ತದೆ. ಅಂದರೆ, ಉತ್ಪಾದನೆ ಹೆಚ್ಚಿದಂತೆ ಈ ಖರ್ಚೂ ಹೆಚ್ಚುತ್ತದೆ. ಉ.ಖ. ಮತ್ತು ಅ.ಖ. ಗಳ ಮೊತ್ತವೇ ಒಟ್ಟು ಖರ್ಚು. ಇದನ್ನು ಒಟ್ಟು ಖರ್ಚು ರೇಖೆ ಪ್ರತಿನಿಧಿಸುತ್ತದೆ. ಒಟ್ಟು ಖರ್ಚು ರೇಖೆ ಉ.ಖ. ರೇಖೆಗೆ ಸಮಾನಾಂತರವಾಗಿದ್ದು ಅವುಗಳ ಮಧ್ಯದ ಅಂತರವೇ ಅ. ಖ. ಎಂದು ನಾವು ನೋಡಬಹುದು.

ಆದಾಯವು ಮೂಲದಲ್ಲಿ ಪ್ರಾರಂಭಿಸಿ ಉತ್ಪಾದನೆ ಹೆಚ್ಚಿದಂತೆಲ್ಲಾ ಹೆಚ್ಚುತ್ತಾ ಹೋಗುತ್ತದೆ. ಆದಾಯ ರೇಖೆ ಇದನ್ನು ತೋರಿಸುತ್ತದೆ. ಆದಾಯ ರೇಖೆ ಮತ್ತು ಒಟ್ಟು ಖರ್ಚು ರೇಖೆಗಳ ಸಂಗಮವೇ ಸವೆಸ್ಥಿ ಬಿಂದು. ಆ ಬಿಂದುವಿನಲ್ಲಿ ಆದಾಯ ಖರ್ಚುಗಳು ಸಮನಾಗಿರುತ್ತವೆ. ಸವೆಸ್ಥಿ ಬಿಂದುವನ್ನಾಧರಿಸಿ ಸವೆಸ್ಥಿ ಉತ್ಪಾದನ ಮಟ್ಟವನ್ನು ನಾವು ಗುರುತಿಸಬಹುದು.

ಸವೆಸ್ಥಿ ಬಿಂದುವನ್ನು ನಿರ್ಣಯಿಸಲು ನಮಗೆ ಗಣಿತ ಸೂತ್ರವೊಂದರ ಸಹಾಯವೂ ಇದೆ. ಆ ಸೂತ್ರ ಈ ರೀತಿ ಇದೆ:

$$\text{ಸವೆಸ್ಥಿ ಆದಾಯ} = \frac{F}{S - V} \times S$$

ಇಲ್ಲಿ

F = ಅನಿವಾರ್ಯ ಖರ್ಚು

S = ಆದಾಯ

V = ಉತ್ಪಾದನಾಧಾರಿತ ಖರ್ಚು.

ಸೂಚನೆ: ಇವನ್ನು ಮಾಹೆಯಾನ ಲೆಕ್ಕ ಮಾಡಬಹುದು ಅಥವಾ ಸಾಲಿಯಾನ ಲೆಕ್ಕ ಮಾಡಬಹುದು.

ಉದಾಹರಣೆಗೆ, ಒಂದು ಉದ್ಯಮದ ಪ್ರಸಕ್ತ ಆದಾಯ ರೂ. 50,000 ಎಂದು ಇಟ್ಟುಕೊಳ್ಳೋಣ. ಅದರ ಅನಿವಾರ್ಯ ಖರ್ಚು ರೂ. 10,000ವೆಂದೂ ಆ ಮಟ್ಟದಲ್ಲಿನ ಉತ್ಪಾದನಾಧಾರಿತ ಖರ್ಚು ರೂ. 30,000 ವೆಂದೂ ಭಾವಿಸೋಣ. (ಎಲ್ಲಾ ಮಾಹೆಯಾನ ಅಂಕಿಗಳು). ಆಗ

$$\text{ಸವೆಸ್ಥಿ ಆದಾಯ} = \frac{10{,}000}{50{,}000 - 30{,}000} \times 50{,}000$$

$$= \text{ರೂ. } 25{,}000.$$

ಅಂದರೆ, ಅದು ತಿಂಗಳಿಗೆ ರೂ. 25,000ಗಳಷ್ಟು ಉತ್ಪಾದಿಸಿ ಮಾರಾಟ ಮಾಡಿದರೆ ಸವೆಸ್ಥಿ ಮಟ್ಟವನ್ನು ತಲುಪಿರುತ್ತದೆ.

ಮೇಲಿನ ಸವೆಸ್ಥಿ ಸೂತ್ರವನ್ನಾಧರಿಸಿ ಉದ್ಯಮಿ ತನ್ನ ಉದ್ಯಮಕ್ಕೆ ಸಂಬಂಧಿಸಿದ ಸವೆಸ್ಥಿಯನ್ನು ಲೆಕ್ಕಮಾಡಿಕೊಂಡರೆ, ಉದ್ಯಮ ಸಾಗುತ್ತಿರುವ ದಿಕ್ಕಿನ ಕಲ್ಪನೆ ನಿರಾಯಾಸವಾಗಿ ದೊರೆಯುತ್ತದೆ.

ಇಲ್ಲಿ ಬ್ಯಾಂಕರುಗಳಿಗೊಂದು ಕಿವಿಮಾತು. ನಿಮ್ಮ ಸಹಾಯದಿಂದ ನಡೆಯುತ್ತಿರುವ ಉದ್ಯಮಿಗಳ ಪ್ರಗತಿಯನ್ನು ಕನಿಷ್ಠ ಪಕ್ಷ ಆರು ತಿಂಗಳಿಗೊಮ್ಮೆಯಾದರೂ ಪರೀಕ್ಷಿಸಬೇಕು. ಇದನ್ನು ಸವೆಸ್ಥಿ ಸೂತ್ರದ ಸಹಾಯದಿಂದ ಸುಲಭವಾಗಿ ಸಾಧಿಸಬಹುದು. ಸವೆಸ್ಥಿ ವಿಶ್ಲೇಷಣೆಯಿಂದ ಸಕಾಲದಲ್ಲಿ ಉದ್ಯಮಗಳ ಕುಂದುಕೊರತೆಗಳನ್ನು ಗುರುತಿಸಿ ಅವುಗಳ ನಿವಾರಣೆಯ ಬಗ್ಗೆ ಸೂಕ್ತ ನಿರ್ಧಾರವನ್ನು ಕೈಗೊಳ್ಳಲು ಸಹಾಯವಾಗುತ್ತದೆ.

# ಬ್ಯಾಂಕಿಂಗ್ ಸಂಸ್ಕೃತಿ

ಸಿ. ಎಸ್. ಶೇಷಾದ್ರಿ

## ಬ್ಯಾಂಕಿಂಗ್ ಸಂಸ್ಕೃತಿ ಎಂಬುದೊಂದು ಇದೆಯೆ? ಇದರ ಸ್ವರೂಪ ಲಕ್ಷಣಗಳೇನು?

ಅತಿ ಪ್ರಾಚೀನ ಕಾಲದಿಂದಲೂ ಭಾರತದಲ್ಲಿ ಬ್ಯಾಂಕಿಂಗ್ ವ್ಯವಸ್ಥೆ (ಲೇವಾದೇವಿಯ ರೂಪದಲ್ಲಿ) ಇದ್ದಿತೆಂದು ಹೇಳಬಹುದಾದರೂ, ಆಧುನಿಕ ವ್ಯವಸ್ಥಿತ ಬ್ಯಾಂಕಿಂಗ್ ಪದ್ಧತಿ ನಮ್ಮ ದೇಶದಲ್ಲಿ ಕೇವಲ ಒಂದು ಶತಮಾನದಷ್ಟೇ ಹಳೆಯದು! ಐರೋಪ್ಯ ವಾಣಿಜ್ಯ ಬ್ಯಾಂಕಿಂಗ್‌ನ ಪದ್ಧತಿಯನ್ನೇ ಭಾರತದಲ್ಲಿಯೂ ಅಂಗೀಕರಿಸಲಾಯಿತು. ಕಳೆದ ಕೆಲವು ದಶಕಗಳಲ್ಲಿ, ಅಂದರೆ ವಿಶೇಷವಾಗಿ ಎರಡನೆಯ ಮಹಾ ಯುದ್ಧದ ತರುವಾಯವಷ್ಟೆ, ಬ್ಯಾಂಕಿಂಗ್ ವಿಧಾನದಲ್ಲಿಯೂ ಮೂಲೋದ್ದೇಶಗಳಲ್ಲಿಯೂ ಗಮನಾರ್ಹ ಬದಲಾವಣೆಗಳಾದುವು.

ಭಾರತದಲ್ಲಿ ಕೂಡ,ಈ ವೇಳೆಗೆ ಬ್ಯಾಂಕಿಂಗ್‌ನ ಮೂಲೋದ್ದೇಶಗಳಲ್ಲಿ ತೀವ್ರತರ ಬದಲಾವಣೆಗಳಾದುವು; ಹಾಗೂ ಬದಲಾದವುಗಳ ಬೆಳವಣಿಗೆಯೂ ಉಂಟಾಗಿದೆ. ಬ್ಯಾಂಕಿಂಗ್ ಭಾರತದಲ್ಲಿ ಹೆಚ್ಚುಹೆಚ್ಚಾಗಿ ಪಸರಿಸಲು ಕಾಲಾವಕಾಶ ಬೇಕಿರುವುದಾದರೂ, ಸಾಮಾನ್ಯವಾಗಿ ನಗರ ಪ್ರದೇಶಗಳಲ್ಲಿ ಪ್ರಗತಿಯನ್ನು ಸಾಧಿಸಿವೆ. ಆದರೂ ಇಷ್ಟೇ ಸಾಲದು. ಈಗಲೂ ಕಛೇರಿಗಳಲ್ಲಿಯೂ, ಕಾರ್ಖಾನೆಗಳಲ್ಲಿಯೂ ದುಡಿಯುವ ನೌಕರರು ವೇತನಗಳನ್ನು ನೇರವಾಗಿ ಹಣದ ರೂಪದಲ್ಲೇ ಪಡೆಯಲಿಚ್ಛಿಸುತ್ತಾರೆ. ಬಹುತೇಕ ಮಂದಿ ಬ್ಯಾಂಕ್ ಖಾತೆಗಳನ್ನು ಹೊಂದಿಲ್ಲ. ಅಷ್ಟೇ ಅಲ್ಲ, ಹಣ ಪಾವತಿಯನ್ನು ಚೆಕ್ಕುಗಳ ಮುಖಾಂತರ ಸ್ವೀಕರಿಸಲು ಹಿಂದೇಟು ಹೊಡೆಯುತ್ತಾರೆ. ಇನ್ನು ಗ್ರಾಮಾಂತರ ಪ್ರದೇಶಗಳಲ್ಲಿ ಬ್ಯಾಂಕಿಂಗ್ ಕುರಿತು ಹೆಚ್ಚಿನ ಅರಿವು ಮೂಡಿಲ್ಲ. ಅನೇಕ ಬ್ಯಾಂಕುಗಳು ಗ್ರಾಮಾಂತರ ಶಾಖೆಗಳನ್ನು ಹೊಂದಿವೆಯಾದರೂ, ಆ ಶಾಖೆಗಳು ಇನ್ನೂ ಸರಿಯಾದ ಆರ್ಥಿಕ ದೃಷ್ಟಿಕೋನ ಹೊಂದಿಲ್ಲ. ಗ್ರಾಮೀಣ ಅರ್ಥವ್ಯವಸ್ಥೆಯ ಮೇಲೆ ಅವುಗಳ ಪರಿಣಾಮ ಆಗಿಲ್ಲ.

ನಾನು ಬ್ಯಾಂಕಿಂಗ್ ಸಂಸ್ಕೃತಿಯನ್ನು ಕುರಿತು ಹೇಳುವಾಗ ನನ್ನ ಗಮನದಲ್ಲಿರುವುದು ಕೇವಲ ಹಣ ಜಮಾವಣೆ ಮತ್ತು ಸಾಲ ನೀಡಿಕೆಯಷ್ಟೇ ಅಲ್ಲ. ಜನರು ತಮ್ಮ ಎಲ್ಲ ಹಣಕಾಸಿನ ವ್ಯವಹಾರಗಳನ್ನು ಬ್ಯಾಂಕುಗಳ ಮುಖಾಂತರವೇ ನಡೆಸಬೇಕೆಂಬ ಕಡೆಗೇ ಹೆಚ್ಚು ಒತ್ತು ಕೊಡುತ್ತಿದ್ದೇನೆ. ಹಣವನ್ನು ಜಮಾ ಮಾಡುವವರು, ರವಾನಿಸುವವರು, ಚೆಕ್ಕುಗಳ ಮುಖಾಂತರ ಹಣ ನೀಡುವವರು, ಬ್ಯಾಂಕು ಖಾತೆಗಳ ಮೂಲಕವೇ ಇವುಗಳನ್ನು ನಡೆಸುವುದು ಸಾಧ್ಯ. ಕೇವಲ ಚಿಲ್ಲರೆ ವೆಚ್ಚದ ಬಾಬ್ತುಗಳಿಗೆ ಮಾತ್ರ ನಗದು ಹಣವನ್ನು ಬಳಸತಕ್ಕದ್ದು.

ಭಾರತೀಯ ಸಂಸ್ಕೃತಿ ಹಲವಾರು ಸಂಸ್ಕೃತಿಗಳ ಸಮ್ಮಿಶ್ರಣ. ತೀರ ಹಳೆಯ ಆದಿವಾಸಿಗಳಿಂದ ಹಿಡಿದು ಅತ್ಯಾಧುನಿಕ ಸಂಸ್ಕೃತಿಯ ಜನರ ವರೆಗೆ ಧರ್ಮ, ಆಹಾರವಿಧಾನ ಮತ್ತು ಸಾಮಾಜಿಕ ಆರ್ಥಿಕ ನಡತೆಯಲ್ಲಿ ಭಿನ್ನತೆ ಇದೆ. ಈ ಭೇದಗಳಿಂದಾಗಿ ಅಲ್ಲಲ್ಲಿ ಘರ್ಷಣೆಗೆ ಅವಕಾಶವಾದರೂ ಒಟ್ಟಿನಲ್ಲಿ ಸಹಜೀವನದ ನೀತಿ, ಭಿನ್ನತೆಯಲ್ಲಿ ಏಕತೆ, ನಮ್ಮ ದೇಶದ ವೈಶಿಷ್ಟ್ಯವಾಗಿದೆ. ಆರ್ಥಿಕ ರಂಗದಲ್ಲಿ ಬ್ಯಾಂಕಿಂಗು ನಗರ ಪ್ರದೇಶಗಳಲ್ಲಿ ಬಿಂದುವಿನ ಸಂಸ್ಕೃತಿಯಾಗಿ ರೂಪುಗೊಳ್ಳುತ್ತಿದೆ. ಆದರೆ ಗ್ರಾಮೀಣ ಪ್ರದೇಶಗಳಲ್ಲಿ ಅದು ಇನ್ನೂ 'ಸಾಲನೀಡಿಕೆಯ' ಸಂಸ್ಕೃತಿಯಾಗಿಯೇ ಮುಂದುವರೆದಿದೆ. ನಮ್ಮ ಹಳ್ಳಿಗಾಡುಗಳಲ್ಲಿ ವಾಸಿಸುವ ಜನರಲ್ಲಿ ಕಡಿಮೆ ಉತ್ಪನ್ನ ಇರುವುದಾದರೂ, ಈ ಹಣದ ಬಹಳಂಶ ಎಲ್ಲ ಬಗೆಯ ಉತ್ಪಾದಕತೆಯನ್ನು ಹೊಂದಿಲ್ಲ.

ನನ್ನ ದೃಷ್ಟಿಯಲ್ಲಿ ನಮ್ಮ ಗ್ರಾಮಾಂತರ ಅಭಿವೃದ್ಧಿಗೆ ಹಳ್ಳಿಗರ ಜೀವನಮಟ್ಟದ ಸುಧಾರಣೆಗೆ ಮಾರ್ಗೋಪಾಯ ವೊಂದೆ. ಅದೆಂದರೆ ಬ್ಯಾಂಕಿಂಗ್ ಪದ್ಧತಿ. ಬ್ಯಾಂಕಿಂಗ್ ಸಂಸ್ಕೃತಿಯಾಗಿ ಗ್ರಾಮೀಣ ಸಂಸ್ಕೃತಿಯ ಒಂದು ಭಾಗವಾಗಿ ರೂಪುಗೊಳ್ಳಬೇಕು. ಬ್ಯಾಂಕಿಂಗ್ ವ್ಯವಸ್ಥೆಯನ್ನು ಹಚ್ಚಿಕೊಳ್ಳಲು ಹಳ್ಳಿಗರಿಗೆ ಅನೇಕ ತೊಂದರೆಗಳು, ಸಮಸ್ಯೆಗಳು

ಇರುವುದು ನಿಸ್ಸಂಶಯ. ಓದು ಬರಹ ಬಾರದಿರುವುದು, ಶಹರದ ಜನರ ಬಗ್ಗೆ ಅಪನಂಬಿಕೆ, ಪರಂಪರಾಗತವಾಗಿ ಅವರು ಸ್ಥಳೀಯ ಲೇವಾದೇವಿಗಾರನೊಂದಿಗೆ ಹೊಂದಿರುವ ಸಂಪರ್ಕ—ಇವು ಒಂದು ಕಾರಣವಾದರೆ, ಬ್ಯಾಂಕುಗಳ ಕಾರ್ಯ ವಿಧಾನದಲ್ಲಿಯ ಕ್ಲಿಷ್ಟತೆ ಅದರ ಅರಿವಿನ ಅಳವಿನೊಳಗೆ ಬಾರದಿರುವುದು ಇನ್ನೊಂದು ಕಾರಣ.

ಇತ್ತೀಚಿನ ವರ್ಷಗಳಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ಬ್ಯಾಂಕಿಂಗ್ ಪದ್ಧತಿಯ ವಿಸ್ತರಣೆಯ ಬಗ್ಗೆ ಹೆಚ್ಚಿನ ಮುತುವರ್ಜಿ ವಹಿಸಲಾಗಿದೆ. ಗ್ರಾಮಾಂತರ ಶಾಖೆಗಳನ್ನು ತೆರೆಯುವುದೂ ಅಂತೆಯೇ ಗ್ರಾಮೀಣ ಬ್ಯಾಂಕುಗಳ ಸ್ಥಾಪನೆಯೂ ಈ ದಿಶೆಯಲ್ಲಿ ಹೊಸ ಪ್ರಯತ್ನಗಳಾಗಿವೆ. ಈ ಪ್ರಯತ್ನಗಳೆಲ್ಲ ಗ್ರಾಮೀಣ ಜನತೆಯ ಮೇಲೆ ಆಂಶಿಕ ಪರಿಣಾಮ ಬೀರಿವೆಯೇ ಹೊರತು ಬ್ಯಾಂಕಿಂಗ್ ಸಂಸ್ಕೃತಿ ಯಾಗಿ, ಗ್ರಾಮೀಣ ಅರ್ಥವ್ಯವಸ್ಥೆಯ ಒಂದು ಅಂಗವಾಗಿ ಇನ್ನೂ ಮಾರ್ಪಟ್ಟಿಲ್ಲ. ಗ್ರಾಮಾಭಿವೃದ್ಧಿಯ ಓಟವನ್ನು ಹೆಚ್ಚಿಸುವುದು ಅವಶ್ಯವಿರುವಂತೆಯೇ ಗ್ರಾಮಾಂತರ ಬ್ಯಾಂಕಿಂಗ್‌ನ ಸುಧಾರಣೆ ಗ್ರಾಮಗಳ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರ ವಹಿಸಬಲ್ಲುದು.

ಬ್ಯಾಂಕಿಂಗ್ ಶಾಖೆಗಳ ಗ್ರಾಮಾಂತರ ವಿಸ್ತರಣೆಗೆ ಮುಖ್ಯ ತೊಡಕೆಂದರೆ, ಸದ್ಯದ ಪರಿಸ್ಥಿತಿಯಲ್ಲಿ, ಅವು ಆರ್ಥಿಕವಾಗಿ ಲಾಭದಾಯಕವಾಗಿಲ್ಲ. ಹೆಚ್ಚಿನ ಇಂಥ ಬ್ಯಾಂಕುಗಳಿಗೆ, ನೇರ ಅಥವಾ ಅಪ್ರತ್ಯಕ್ಷ ಸಹಾಯಧನ ವ್ಯವಸ್ಥೆಯಿಂದ ನಡೆಸಲಾಗುತ್ತಿದೆ. ನಗರ ಪ್ರದೇಶಗಳಲ್ಲೇ ಅಭಿವೃದ್ಧಿ ಹೊಂದಿ, ವ್ಯಾಪಾರ ವಾಣಿಜ್ಯ ಕೈಗಾರಿಕೆಗಳಿಗೆ ಸಹಾಯ ನೀತಿಯನ್ನು ಅವಲಂಬಿಸಿದ ಈ ಬ್ಯಾಂಕುಗಳ ನಿರ್ವಹಣ ವೆಚ್ಚ ಸಹಜವಾಗಿಯೂ ಹೆಚ್ಚಿರುವುದರಿಂದ ಗ್ರಾಮ ಪ್ರದೇಶಗಳಿಗೆ ಇದು ಹೊರೆಯಾಗುವುದು. ಈ ತೊಡಕು ನಿವಾರಣೆಯಾಗಬೇಕಾದರೆ, ಗ್ರಾಮೀಣ ಅರ್ಥ ವ್ಯವಸ್ಥೆಗೆ ಹೊಂದಾಣಿಕೆಯಾಗಬಲ್ಲ ದರದಲ್ಲಿ ನಿರ್ವಹಣ ವೆಚ್ಚದ ಬ್ಯಾಂಕುಗಳ ಸ್ಥಾಪನೆಯಾಗಬೇಕು: ಇಲ್ಲವೇ ವೆಚ್ಚವನ್ನು ಸರಿಯಾಗಿಸಬಲ್ಲಂತೆ ವ್ಯವಹಾರದಲ್ಲಿ ಹೆಚ್ಚಳವಾಗಬೇಕು.

ಇನ್ನು ಹಳ್ಳಿಗರ ತಿಳಿವಳಿಕೆಯ ಮಟ್ಟಕ್ಕೆ ಬ್ಯಾಂಕಿಂಗ್ ವ್ಯವಹಾರವನ್ನು ಸರಳಗೊಳಿಸುವುದು ಅವಶ್ಯವಿದೆ; ಇಲ್ಲವೆ ಅವರ ತಿಳಿವಳಿಕೆಯ ಮಟ್ಟ ಹೆಚ್ಚಿಸಲು ಪ್ರಯತ್ನಿಸ ಬಹುದು. ಈ ಕೆಲಸವನ್ನು ವಾಣಿಜ್ಯ ಬ್ಯಾಂಕುಗಳಲ್ಲಿ ಮಾಡಲಾಗದಿದ್ದಲ್ಲಿ, ಹೊಸ ಗ್ರಾಮೀಣ ಬ್ಯಾಂಕ್ ವ್ಯವಸ್ಥೆ ಯನ್ನು ರೂಢಿಸುವುದು ಅವಶ್ಯವಿದೆ. ವಾಣಿಜ್ಯ ಬ್ಯಾಂಕು ಗಳು ಆರ್ಥಿಕ ಸಹಾಯದಲ್ಲಿ ವಿಶೇಷವಾಗಿ ಗಳಿಸಿರುವ ಪರಿಣತಿ ಯನ್ನು ಈ ಬ್ಯಾಂಕುಗಳಿಗೆ ದೊರಕಿಸಬೇಕು. ಸಹಕಾರಿ ಬ್ಯಾಂಕುಗಳು ಸಹ ಗ್ರಾಮಗಳಿಗಿಂತ ನಗರಗಳಲ್ಲಿ ಹೆಚ್ಚು ಯಶಸ್ವಿಯಾಗಿವೆ. ಇನ್ನು ಗ್ರಾಮೀಣ ಬ್ಯಾಂಕುಗಳು ತಮ್ಮ ಪರಿಣಾಮಕಾರಿತ್ವವನ್ನು ಇನ್ನೂ ಸಿದ್ಧಪಡಿಸಬೇಕಾಗಿವೆ. ಸದ್ಯದ ಆವಶ್ಯಕತೆ ಎಂದರೆ, ವಿವಿಧ ವಿಧಾನಗಳಿಂದ ಬ್ಯಾಂಕಿಂಗ್ ಸಂಸ್ಕೃತಿಯನ್ನು ಭಾರತೀಯ ಸಂಸ್ಕೃತಿಯಲ್ಲಿ ವಿಸ್ತರಿಸುವ ಪ್ರಯೋಗಗಳನ್ನು ಮಾಡತಕ್ಕದ್ದು ಮತ್ತು ಆರ್ಥಿಕ ಏಳಿಗೆಗೆ ಒತ್ತುಕೊಡತಕ್ಕದ್ದು.

ಸರ್ಕಾರ ಜಾರಿ ಮಾಡಿರುವ ಗ್ರಾಮೀಣ ಋಣ ವಿಮೋಚನೆಯ ಕಾನೂನು ಯಶಸ್ವಿಯಾಗಬೇಕಾದರೆ ಮುಲ್ಲಾನಿಗಳ ವ್ಯವಸ್ಥೆಗೆ ಪ್ರತಿಯಾದ ಯೋಗ್ಯ ಹೊಸ ವ್ಯವಸ್ಥೆ ಜಾರಿಗೆ ಬರಬೇಕು. ಇಲ್ಲದಿದ್ದಲ್ಲಿ, ಆ ಹಳ್ಳಿಗರಿಗೆ ಇದ್ದ ಸಾಲದ ವ್ಯವಸ್ಥೆಯನ್ನು ಬತ್ತಿಸಿದಂತಾಗುತ್ತದೆ. ನಗರಗಳಲ್ಲಿ ಕೂಡ ವಾಣಿಜ್ಯ, ವ್ಯಾಪಾರ, ಕೈಗಾರಿಕೆಗಳು, ಸ್ವತಃ ಉದ್ಯೋಗ ಹೊಂದಿರುವವರು ಈಕ್ಷೇತ್ರಗಳಿಗಷ್ಟೇ ಬ್ಯಾಂಕಿಂಗ್ ಸೀಮಿತ ವಾಗಿದೆ. ಕೈಗಾರಿಕೆಗಳಲ್ಲಿ, ಕಛೇರಿಗಳಲ್ಲಿ ಕೆಲಸ ಮಾಡುವ ನೌಕರವರ್ಗ ಇದರಲ್ಲಿ ಹೆಚ್ಚಾಗಿ ಸೇರಿಲ್ಲ. ಅವರೂ ಬ್ಯಾಂಕಿಂಗ್ ವ್ಯವಸ್ಥೆಯನ್ನು ಸ್ವೀಕರಿಸುವುದು ಅವಶ್ಯವಿದೆ. ಇದನ್ನು ಸಾಧಿಸಬೇಕಾದರೆ ಅವರಿಗೆ ಬ್ಯಾಂಕ್ ಖಾತೆಗಳ ಉಪಯುಕ್ತತೆಯನ್ನು ಮನಗಾಣಿಸಬೇಕು.

ಇಲ್ಲಿ ಕೆಲವು ಸಲಹೆಗಳಿವೆ:

1 ವಿಸ್ತರಣಾಧಿಕಾರಿಗಳ ನೇಮಕ: ಪಟ್ಟಣಗಳಿಗೂ ಗ್ರಾಮಗಳಿಗೂ ಅನ್ವಯವಾಗುವಂತೆ ಬ್ಯಾಂಕುಗಳು ವಿಸ್ತ ರಣಾಧಿಕಾರಿಗಳನ್ನು ಹೊಂದಿರಬೇಕು. ಇವರ ಮುಖ್ಯ ಕೆಲಸವೆಂದರೆ ಕೆಲಸಗಾರರನ್ನೂ ಅವರ ಮನೆಯವರನ್ನೂ ಸಂದರ್ಶಿಸಿ ಬ್ಯಾಂಕಿಂಗ್‌ನ ಉಪಯುಕ್ತತೆಯನ್ನು ವಿವರಿಸಿ ಅದರ ಪ್ರಯೋಜನವನ್ನು ಪಡೆಯುವಂತೆ ಮನವರಿಕೆ ಮಾಡಿಕೊಡತಕ್ಕದ್ದು. ಅದೇ ಪ್ರಕಾರವಾಗಿ, ಜನರಿಗಿರು ವಂತಹ ಸಮಸ್ಯೆಗಳ ಕುರಿತೂ ಅವರು ಬ್ಯಾಂಕಿಗೆ ವರದಿ ಮಾಡುತ್ತಿರಬೇಕು. ಅವರಿಗೆ ಕಚೇರಿಯ ಕೆಲಸವಿರತಕ್ಕುದ್ದಲ್ಲ. ಹೊಸ ಖಾತೆಗಳ ಸಂಖ್ಯೆಗಳಲ್ಲಿ ಅವರ ಕಾರ್ಯದಕ್ಷತೆ ವ್ಯಕ್ತ ವಾಗಬೇಕು. ಬ್ಯಾಂಕಿನ ವ್ಯವಸ್ಥಾಪಕರೆಂದು ಬ್ಯಾಂಕ್ ಅಧಿಕಾರಿಗಳನ್ನು ನೇಮಿಸುವ ಮೊದಲು ಇಂತಹ ಅನುಭವ ವನ್ನು ಪ್ರತಿಯೊಬ್ಬ ಅಧಿಕಾರಿಗೆ ನೀಡುವ ಬಗ್ಗೆ ಆಲೋಚಿಸ ಬೇಕು. ಈಗಿರುವ ಪದ್ಧತಿಯೆಂದರೆ, ಬ್ಯಾಂಕ್ ವ್ಯವಸ್ಥಾ ಪಕರು ಕೇವಲ ಮೂಲ ಬಂಡವಾಳವುಳ್ಳ ದೊಡ್ಡ ಕುಳ ಗಳನ್ನೇ ಹಿಡಿಯುವುದು ಅಥವಾ ಹಣದ ಬಾಕಿ ಬರಬೇಕಾ ದವರನ್ನು ಹಿಡಿಯುವುದು. ವ್ಯಕ್ತಿಯ ಮತ್ತು ಸಾರ್ವಜನಿಕ ಸಂಪರ್ಕದ ಅಭಾವವಿದೆ.

2 ಕಾಯಿದೆಯನ್ನು ಚಲಾಯಿಸಿ, ರೂ. 50 ಮತ್ತು ಹೆಚ್ಚಿನ ಹಣ ಪಾವತಿಯನ್ನು ಚೆಕ್ಕುಗಳ ಮುಖಾಂತರವೇ ಮಾಡುವಂತೆ ಮಾಡಬೇಕು. ನೌಕರ ವರ್ಗದ ವೇತನ ಪಾವತಿ ಬ್ಯಾಂಕ್ ಖಾತೆಗೇ ಆಗಬೇಕು. ಇದಕ್ಕೆ ಆಕರ್ಷಣೆ ಯಾಗಿ ಮಾಲೀಕವರ್ಗ, ನೌಕರರ ವೇತನದ 50%ರಷ್ಟು ಹೆಚ್ಚುವರಿ ಸಾಲಕ್ಕೆ ಗ್ಯಾರಂಟಿ ನೀಡಬಹುದು.

3 ಬ್ಯಾಂಕುಗಳು ಸಾಕಷ್ಟು ದಕ್ಷ ಮತ್ತು ವಿನಯಪೂರ್ವಕ ಸೇವೆಯನ್ನು ತಮ್ಮ ಗ್ರಾಹಕರಿಗೆ ನೀಡುವಲ್ಲಿ ಪರಿಣತಿಯನ್ನು ತೋರಿಸಬೇಕು.

# ಅಂತರರಾಷ್ಟ್ರೀಯ ಆರ್ಥಿಕ ಸಮತೋಲ: ಕೆಲವು ಸಮಸ್ಯೆಗಳು

ಸಿ. ಕೆ. ರೇಣುಕಾರ್ಯ

## ದಿನೇ ದಿನೇ ಗಂಭೀರವಾಗುತ್ತಿರುವ ಅಂತರರಾಷ್ಟ್ರೀಯ ಆರ್ಥಿಕ ಸಮಸ್ಯೆಯ ವಿಶ್ಲೇಷಣೆ

ವಿಶ್ವ ಆರ್ಥಿಕ ಬಿಕ್ಕಟ್ಟು ದಿನದಿಂದ ದಿನಕ್ಕೆ ಗಂಭೀರ ಸ್ವರೂಪವನ್ನು ಪಡೆದುಕೊಳ್ಳುತ್ತಿದೆ. ಅಂತರರಾಷ್ಟ್ರೀಯ ಮಟ್ಟದಲ್ಲಿನ ಸಹಕಾರ ಒಂದು ಕಡೆ ಕುಸಿಯುತ್ತಿದ್ದರೆ, ಮತ್ತೊಂದು ಕಡೆ ಅಭಿವರ್ಧಿತ ಮತ್ತು ಅಭಿವೃದ್ಧಿಶೀಲ ರಾಷ್ಟ್ರಗಳ ನಡುವಣ ಅಂತರ ಹೆಚ್ಚಾಗುತ್ತಿದೆ. ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳ ಒಳಗೆ ಆರ್ಥಿಕ ಅಸಮಾನತೆ ಹೇಗೆ ಎದ್ದು ಕಾಣುತ್ತಿದೆಯೋ ಅದೇ ರೀತಿ ರಾಷ್ಟ್ರ-ರಾಷ್ಟ್ರಗಳ ನಡುವಿನ ಆರ್ಥಿಕ ಅಸಮಾನತೆಯೂ ತುಂಬಾ ಗಂಭೀರ ಮಟ್ಟವನ್ನು ಮುಟ್ಟುತ್ತಿದೆ. ವಿಶ್ವ ಆರ್ಥಿಕ ಸಮಸ್ಯೆಗಳನ್ನು ಬಗೆಹರಿಸುತ್ತಿರುವುದರಲ್ಲಿ ಇಂದು ಅತ್ಯಂತ ಮಹತ್ವದ ಪಾತ್ರವನ್ನು ಎದುರಿಸುತ್ತಿರುವ ಸಂಸ್ಥೆಯೆಂದರೆ ಅಂತರ ರಾಷ್ಟ್ರೀಯ ಹಣ ನಿಧಿ.

ಪ್ರಪಂಚದ ಎಲ್ಲ ರಾಷ್ಟ್ರಗಳೂ ತಮ್ಮವೇ ಆದ ಅನೇಕ ಆಂತರಿಕ ಸಮಸ್ಯೆಗಳನ್ನು ಎದುರಿಸುತ್ತಿವೆ. ಅಭಿವೃದ್ಧಿ ಹೊಂದಿರುವ ರಾಷ್ಟ್ರಗಳ ಸಮಸ್ಯೆಯ ಸ್ವರೂಪವೇ ಬೇರೆ. ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳ ಆರ್ಥಿಕ ಸಮಸ್ಯೆಯ ಸ್ವರೂಪವೇ ಬೇರೆ. ಆದರೆ, ಅಂತರರಾಷ್ಟ್ರೀಯ ವ್ಯಾಪಾರ ಸಂಬಂಧ ಮತು ಅಂತರ ರಾಷ್ಟ್ರೀಯ ಹಣಕಾಸು ವ್ಯವಹಾರ ಸಂಬಂಧಗಳಿಂದಾಗಿ ಪ್ರಪಂಚದ ಎಲ್ಲ ರಾಷ್ಟ್ರಗಳಲ್ಲಿ ಇಂದು ಪ್ರಮುಖವಾಗಿ ಎದ್ದು ಕಾಣುತ್ತಿರುವ ಸಮಸ್ಯೆಯೆಂದರೆ, ಅವುಗಳ ಅಂತರರಾಷ್ಟ್ರೀಯ ಲೇಣೆ-ದೇಣೆಯಲ್ಲಿ ಉಂಟಾಗುತ್ತಿರುವ ಕೊರತೆ. ನಾನಾ ಕಾರಣಗಳಿಂದಾಗಿ ಈ ಕೊರತೆಯುಂಟಾಗುತ್ತಿದ್ದು ಅದರ ಗಾತ್ರ ವರ್ಷದಿಂದ ವರ್ಷಕ್ಕೆ ವಿಪರೀತವಾಗಿ ಬೆಳೆಯುತ್ತಿದೆ. ಉದಾಹರಣೆಗೆ, ಅಂತರ ರಾಷ್ಟ್ರೀಯ ಲೇಣೆ-ದೇಣೆ ಕೊರತೆ 1973ರಲ್ಲಿ 1100 ಕೋಟಿ ಅಮೆರಿಕನ್ ಡಾಲರ್‌ಗಳಿದ್ದುದು 1978ರಲ್ಲಿ ಇದು 3100 ಕೋಟಿ ಅಮೆರಿಕನ್ ಡಾಲರ್‌ಗಳನ್ನು ಮುಟ್ಟಿತ್ತು. 1979ರಲ್ಲಿ ಪೆಟ್ರೋಲಿಯಂ ಉತ್ಪಾದಿಸದ ಅಭಿವೃದ್ಧಿಶೀಲ ರಾಷ್ಟ್ರಗಳು 4000 ಕೋಟಿ ಅಮೆರಿಕನ್ ಡಾಲರ್‌ಗಳಷ್ಟು ಕೊರತೆಯನ್ನು ಅನುಭವಿಸಬೇಕಾಗಿದೆ.

ಲೇಣೆ-ದೇಣೆ ಕೊರತೆಯನ್ನು ಅನುಭವಿಸುತ್ತಿರುವ ರಾಷ್ಟ್ರಗಳ ಆಂತರಿಕ ಆರ್ಥಿಕ ಬೆಳವಣಿಗೆ ಬಹಳ ಮಂದಗತಿಯಲ್ಲಿ ಸಾಗುತ್ತಿದೆ. ಉದಾಹರಣೆಗೆ 1967 ಮತ್ತು 1972ರ ನಡುವೆ ಈ ರಾಷ್ಟ್ರಗಳ ನೈಜ ಬೆಳವಣಿಗೆಯ ದರ ವರ್ಷಕ್ಕೆ ಸೇ. 6ರಷ್ಟಿದ್ದು, ಈಗ ಅದು ವರ್ಷಕ್ಕೆ ಸೇ. 5 ಕ್ಕೆ ಇಳಿದಿದೆ. ಅಂದರೆ ನಾನಾ ರೀತಿಯಲ್ಲಿ ವಿದೇಶೀ ವಾಣಿಜ್ಯದಿಂದ ಉಂಟಾಗುತ್ತಿರುವ ಕೊರತೆಯನ್ನು ತುಂಬಿಕೊಳ್ಳುತ್ತಿರುವ ಈ ರಾಷ್ಟ್ರಗಳು ಹಣದುಬ್ಬರಕ್ಕೆ ವೀಳ್ಯವನ್ನು ಕೊಡುತ್ತಿವೆ. ಆಂತರಿಕವಾಗಿಯೇ ಉಲ್ಬಣಗೊಳ್ಳುತ್ತಿರುವ ಹಣದುಬ್ಬರದ ಕಾರಣಗಳಿಗೆ ಬಾಹ್ಯರಾಷ್ಟ್ರಗಳಿಂದ ಹಣವನ್ನು ಪಡೆಯುವುದರ ಮೂಲಕ ಇನ್ನೂ ಹೆಚ್ಚಿನ ಪುಷ್ಟಿ ದೊರೆಯುತ್ತಿದೆ. ಅಂತರರಾಷ್ಟ್ರೀಯ ಮಟ್ಟದಲ್ಲಿ ಈ ರಾಷ್ಟ್ರಗಳು ಎದುರಿಸಬೇಕಾಗಿರುವ ಸಮಸ್ಯೆ ತುಂಬಾ ಕ್ಲಿಷ್ಟ ಸ್ವರೂಪದ್ದಾಗಿದೆ.

### ಕೊರತೆಗೆ ಕಾರಣಗಳು

ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಲ್ಲಿ ಲೇಣೆ-ದೇಣೆಯ ಕೊರತೆ ಏಕೆ ಹಿಗ್ಗುತ್ತಿದೆ ಎನ್ನುವುದಕ್ಕೆ ಕಾರಣಗಳನ್ನು ಹುಡುಕುವುದು ಕಷ್ಟವೇನಲ್ಲ. 1973ರಿಂದ ಪೆಟ್ರೋಲಿಯಂ ಪದಾರ್ಥಗಳ ಬೆಲೆಗಳು ಒಂದೇ ಸಮನೆ

ಏರುತ್ತಿದ್ದು, ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳ ಆಮದು ತುಂಬಾ ದುಬಾರಿಯಾಗುತ್ತಿದೆ. ಜೊತೆಗೆ, ಈ ರಾಷ್ಟ್ರಗಳು ಆಮದು ಮಾಡಿಕೊಳ್ಳಬೇಕಾಗಿರುವ ಬಂಡವಾಳ ಸರಕುಗಳ ಬೆಲೆಗಳು ಸಹ ತುಟ್ಟಿಯಾಗುತ್ತಲೇ ನಡೆದಿದೆ. ಇವೆರಡಕ್ಕೆ ಅನುಗುಣವಾಗಿ ಅಭಿವೃದ್ಧಿಶೀಲ ರಾಷ್ಟ್ರಗಳ ರಫ್ತಿನ ಬೆಲೆಗಳೂ ಅಧಿಕವಾಗುತ್ತಿದ್ದರೆ ಕೊರತೆಯ ಸ್ವರೂಪ ಅಷ್ಟು ಗಂಭೀರದಾಗುತ್ತಿರಲಿಲ್ಲ. ಆದರೆ ಅಭಿವೃದ್ಧಿಶೀಲ ರಾಷ್ಟ್ರಗಳಿಂದ ಮುಖ್ಯವಾಗಿ ಕೃಷಿಮೂಲ ಪದಾರ್ಥಗಳು ರಫ್ತಾಗುತ್ತಿವೆ. ಬಂಡವಾಳ ಸರಕುಗಳ ಬೆಲೆಗಳು ಏರುವ ದರದಲ್ಲಿ ಅವುಗಳ ಬೆಲೆಗಳು ಹೆಚ್ಚುತ್ತಿಲ್ಲ. ಹೀಗಾಗಿ ತಮ್ಮ ರಫ್ತಿನಿಂದ ಬರುವ ಆದಾಯದಿಂದ ಆಮದನ್ನು ತೂಗಿಸುವುದಕ್ಕೆ ಈ ರಾಷ್ಟ್ರಗಳಿಗೆ ಶಕ್ಯವಾಗುತ್ತಿಲ್ಲ. ಇವೆರಡೂ ಕಾರಣಗಳ ಜೊತೆಗೆ, ಈಗಾಗಲೇ ತಮ್ಮ ಲೇಣೆ-ದೇಣೆ ಕೊರತೆಯನ್ನು ತುಂಬುವುದಕ್ಕೆ ಮಾಡಿರುವ ಅಂತರರಾಷ್ಟ್ರೀಯ ಸಾಲಗಳ ಮೇಲೆ ಅಭಿವೃದ್ಧಿಶೀಲ ರಾಷ್ಟ್ರಗಳು ನೀಡಬೇಕಾಗಿರುವ ಬಡ್ಡಿ ಅಗಾಧವಾಗಿ ಬೆಳೆದಿದೆ. ಉದಾಹರಣೆಗೆ ಪೆಟ್ರೋಲಿಯಂ ಉತ್ಪಾದಿಸದ ಅಭಿವೃದ್ಧಿಶೀಲ ರಾಷ್ಟ್ರಗಳ ಅಂತರರಾಷ್ಟ್ರೀಯ ಸಾಲದ ಹೊಣೆ 1978ರಲ್ಲಿ ಅವುಗಳ ಸ್ಥೂಲ ರಾಷ್ಟ್ರೀಯ ಉತ್ಪನ್ನದ ಶೇ. 21ರಷ್ಟಾಗಿತ್ತು! ಇನ್ನೊಂದು ರೀತಿಯಲ್ಲಿ ಹೇಳುವುದಾದರೆ, ಈ ರಾಷ್ಟ್ರಗಳು ತಮ್ಮ ರಫ್ತು ಆದಾಯದ ಶೇ. 13ರಷ್ಟನ್ನು ಕೇವಲ ಅಂತರರಾಷ್ಟ್ರೀಯ ಬಡ್ಡಿ ಪಾವತಿಗಾಗಿ ಮೀಸಲಿಡಬೇಕಾಗಿದೆ. ಈ ರಾಷ್ಟ್ರಗಳು ತಮ್ಮ ಈ ಬೇಡಿಕೆಯನ್ನು ತಪ್ಪಿಸಿಕೊಳ್ಳದಿದ್ದರೆ, ಆಂತರಿಕ ಹಣದುಬ್ಬರದ ಮತ್ತು ಮುಂದಗತಿಯ ಬೆಳವಣಿಗೆಯ ಸಮಸ್ಯೆಯನ್ನು ಪರಿಹರಿಸಿಕೊಳ್ಳುವುದು ಬಹಳ ಕಷ್ಟ.

## ಅಭಿವೃದ್ಧಿ ಹೊಂದಿರುವ ರಾಷ್ಟ್ರಗಳ ಹೊಣೆಗಾರಿಕೆ

ಆರ್ಥಿಕ ಅಸಮಾನತೆಯನ್ನು ತಪ್ಪಿಸಲು ಅಭಿವೃದ್ಧಿಶೀಲ ರಾಷ್ಟ್ರಗಳು ಅನಭಿವರ್ಧಿತ ರಾಷ್ಟ್ರಗಳಿಗೆ ಹೆಚ್ಚಿನ ಆರ್ಥಿಕ ನೆರವನ್ನು ನೀಡಬೇಕೆಂಬ ಸಿದ್ಧಾಂತವನ್ನು ಇಂದು ಪ್ರಪಂಚದ ಎಲ್ಲ ಅಭಿವರ್ಧಿತ ರಾಷ್ಟ್ರಗಳೂ ಒಪ್ಪಿಕೊಂಡಿವೆ. ಅಂದರೆ ಪ್ರಪಂಚದ ಆರ್ಥಿಕ ಸಮತೋಲವನ್ನು ಕಾಪಾಡುವ ದೃಷ್ಟಿಯಿಂದ ಅಭಿವರ್ಧಿತ ರಾಷ್ಟ್ರಗಳು ಅನಭಿವರ್ಧಿತ ರಾಷ್ಟ್ರಗಳಿಗೆ ಆರ್ಥಿಕ ಉತ್ತೇಜನವನ್ನುಂಟುಮಾಡುವ ರೀತಿಯಲ್ಲಿ ನೆರವಾಗಬೇಕೆಂಬುದು ಈ ಸಿದ್ಧಾಂತದ ತಿರುಳು. ಆದರೆ ಅಭಿವರ್ಧಿತ ರಾಷ್ಟ್ರಗಳು ರಾಜಕೀಯ ಒತ್ತಡಗಳಿಂದಾಗಿ ತಮ್ಮ ಕರ್ತವ್ಯವನ್ನು ನಿಷ್ಠೆಯಿಂದ ನೆರವೇರಿಸಿಲ್ಲ. ಹೀಗಾಗಿ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಅಂತರರಾಷ್ಟ್ರೀಯ ಲೇಣೆ-ದೇಣೆ ಕೊರತೆ ವರ್ಷದಿಂದ ವರ್ಷಕ್ಕೆ ಹೆಚ್ಚುತ್ತಾ ನಡೆದಿದೆ. ಮುಂದಿನ ಪಟ್ಟಿಯಿಂದ ಈ ಅಂಶ ಹೆಚ್ಚು ಸ್ಪಷ್ಟವಾಗಿ ಗೋಚರವಾಗುತ್ತದೆ. :

1973–79ರ ಅವಧಿಯಲ್ಲಿನ ಅಂತರರಾಷ್ಟ್ರೀಯ ಲೇಣೆ-ದೇಣೆ ತಃಖ್ತೆಯ ಕೊರತೆಯ ಪ್ರಮಾಣ
(ನೂರು ಕೋಟಿ ಡಾಲರ್‌ಗಳಲ್ಲಿ)

| ವರ್ಷ | ಕೈಗಾರಿಕೆಯಲ್ಲಿ ಪ್ರಗತಿ ಸಾಧಿಸಿರುವ ರಾಷ್ಟ್ರಗಳು | ಪೆಟ್ರೋಲಿಯಂ ಪದಾರ್ಥಗಳನ್ನು ರಫ್ತು ಮಾಡುವ ರಾಷ್ಟ್ರಗಳು | ಪೆಟ್ರೋಲಿಯಮ್ಮನ್ನು ಉತ್ಪಾದಿಸದ ರಾಷ್ಟ್ರಗಳು | ಅಭಿವೃದ್ಧಿಯನ್ನು ಸಾಧಿಸಿರುವ ಕೃಷಿ ಪ್ರಧಾನ ರಾಷ್ಟ್ರಗಳು | ಒಟ್ಟು |
|---|---|---|---|---|---|
| 1973 | 19 | 06 | —11 | — 1 | 15 |
| 1974 | 24 | 68 | —30 | —14 | 20 |
| 1975 | 25 | 35 | —38 | —15 | 7 |
| 1976 | 07 | 40 | —26 | —14 | 8 |
| 1977 | 34 | 32 | —21 | —13 | 2 |
| 1978 | 33 | 06 | —31 | —06 | 2 |
| 1979 | 10 | 43 | —43 | —10 | — |

ಮೂಲ: Finance and Development, Sept. 1979, Vol. 16, No. 3, page 9

ಅಭಿವರ್ಧಿತ ಮತ್ತು ಅಭಿವೃದ್ಧಿಶೀಲ ರಾಷ್ಟ್ರಗಳು ಅಂತರರಾಷ್ಟ್ರೀಯ ಆರ್ಥಿಕ ಮಟ್ಟದಲ್ಲಿ ವಿಭಿನ್ನ ಸ್ಥಿತಿಯಲ್ಲಿರುವುದು ಮೇಲಿನ ಅಂಕಿ-ಅಂಶಗಳಿಂದ ಸ್ಪಷ್ಟವಾಗುತ್ತದೆ. ಅಭಿವರ್ಧಿತ ರಾಷ್ಟ್ರಗಳು ತಮ್ಮ ಹೊಣೆಗಾರಿಕೆಯನ್ನು ಎಷ್ಟರಮಟ್ಟಿಗೆ ನಿರ್ವಹಿಸಿವೆ ಎನ್ನುವುದೂ ಇದರಿಂದ ವ್ಯಕ್ತವಾಗುತ್ತದೆ.

ಅಂತರರಾಷ್ಟ್ರೀಯ ಹಣ ನಿಧಿ ತನ್ನದೇ ರೀತಿಯಲ್ಲಿ ಅಂತರರಾಷ್ಟ್ರೀಯ ಹಣದ ಬಿಕ್ಕಟ್ಟನ್ನು ಪರಿಹರಿಸಲು ಕಾರ್ಯೋನ್ಮುಖವಾಗಿದೆ. ಅಭಿವೃದ್ಧಿಶೀಲ ರಾಷ್ಟ್ರಗಳ ಸಮಸ್ಯೆಯನ್ನು ತನ್ನ ಅಮೂಲ್ಯ ಸಂಪನ್ಮೂಲಗಳಿಂದ ಹಗುರಗೊಳಿಸಲು ನಿಧಿ ಪ್ರಯತ್ನಿಸುತ್ತಿದೆ. ಆಂತರಿಕವಾಗಿ ನಿಧಿಯಲ್ಲಿ ಸಹ ರಾಜಕೀಯ ಒತ್ತಡಗಳಿದ್ದಾಗ್ಯೂ, ಅಂತರರಾಷ್ಟ್ರೀಯ ಆರ್ಥಿಕ ಸಮತೋಲಕ್ಕೆ ನಿಧಿ ನಾನಾ ದಿಕ್ಕುಗಳಿಂದ ಪ್ರಯತ್ನಿಸುತ್ತಿದೆ. ಬಡ್ಡಿರಹಿತವಾಗಿ ರಾಷ್ಟ್ರಗಳಿಗೆ ಸಾಲ ನೀಡುವುದು, ಧಾರಾಳವಾಗಿ ಹಣದ ನೆರವನ್ನು ನೀಡುವುದು—ಇವು ನಿಧಿಯ ಎರಡು ಪ್ರಮುಖ ಕರ್ತವ್ಯಗಳಾಗಿವೆ. 1976 ಮತ್ತು 1979ರ ನಡುವೆ, ಅಭಿವೃದ್ಧಿಶೀಲ ರಾಷ್ಟ್ರಗಳು ತಮ್ಮ ಆಮದು ಆಗತ್ಯದ ಸೇ. 50ರಷ್ಟು ಹಣವನ್ನು ನಿಧಿಯಿಂದ ಪಡೆದುಕೊಂಡಿವೆ. ತನ್ನ ವಿಶೇಷ ಡ್ರಾಯಿಂಗ್ ಹಕ್ಕು (ಸ್ಪೆಷಲ್ ಡ್ರಾಯಿಂಗ್ ರೈಟ್ಸ್). ಸಂಪನ್ಮೂಲದಿಂದ ಅಭಿವೃದ್ಧಿಶೀಲ ರಾಷ್ಟ್ರಗಳು ತಮ್ಮ ಲೇಣೆ-ದೇಣೆಯಲ್ಲಿ ಸಮತೋಲವನ್ನು ಸಾಧಿಸುವುದಕ್ಕೆ ನಿಧಿ ವಿಶೇಷ ರೀತಿಯಲ್ಲಿ ನೆರವಾಗುತ್ತಿದೆ.

ಆದರೆ ಅಂತರರಾಷ್ಟ್ರೀಯ ಹಣ ನಿಧಿಯೂ ರಾಜಕೀಯ ಒತ್ತಡಗಳಿಂದ ಮುಕ್ತವಾಗಿಲ್ಲ. ಹೀಗಾಗಿ ಅಂತರರಾಷ್ಟ್ರೀಯ ಹಣದ ಕ್ಷೇತ್ರದಲ್ಲಿ ಸಮತೋಲ ಸ್ಥಿತಿಯನ್ನುಂಟುಮಾಡುವುದರಲ್ಲಿ ಅದರ ಪಾತ್ರಕ್ಕೂ ಅನೇಕ ಮಿತಿಗಳು ಉಂಟಾಗಿವೆ.

ಹಾಗಾದರೆ ಅಂತರರಾಷ್ಟ್ರೀಯ ಮಟ್ಟದಲ್ಲಿ ಹಣದ ಸ್ಥಿರತೆಯನ್ನೇರ್ಪಡಿಸಲು ಅಗತ್ಯವಾದ ಕ್ರಮಗಳೇನು, ಎನ್ನುವುದು ಸಹಜವಾದ ಪ್ರಶ್ನೆ. ಸದ್ಯಕ್ಕೆ ಎರಡು ಕ್ರಮಗಳು ಈ ಸಮಸ್ಯೆಯನ್ನು ಹಗುರಗೊಳಿಸಬಲ್ಲವು ಎನ್ನಿಸುತ್ತದೆ. ಮೊದಲನೆಯದಾಗಿ, ಅಭಿವರ್ಧಿತ ರಾಷ್ಟ್ರಗಳು ಅಭಿವೃದ್ಧಿಶೀಲ ರಾಷ್ಟ್ರಗಳ ನೆರವಿಗೆ ಉತ್ಸಾಹದಿಂದ ಮುಂದಾಗಬೇಕು. ಇದುವರೆಗೆ ಈ ದಿಕ್ಕಿನಲ್ಲಿ ಆಗಿರುವ ಪ್ರಗತಿ ಬಹಳ ನಿರಾಶಾದಾಯಕವಾಗಿದೆ. ಏಕೆಂದರೆ, ಕೈಗಾರಿಕಾಭಿವೃದ್ಧಿ ಹೊಂದಿದ ರಾಷ್ಟ್ರಗಳು ತಮ್ಮ ಸ್ಥೂಲ ರಾಷ್ಟ್ರೀಯ ಉತ್ಪನ್ನದ ಸೇ. 0.7ರಷ್ಟು ನೆರವನ್ನು ಅಭಿವೃದ್ಧಿಶೀಲ ರಾಷ್ಟ್ರಗಳಿಗೆ ನೀಡಬೇಕೆಂದು ಈಬಗ್ಗೆ ಹಲವು ವರ್ಷಗಳ ಹಿಂದೆಯೇ ವಿಶ್ವಸಂಸ್ಥೆ ಗೊತ್ತುಮಾಡಿತ್ತು. ಆದರೆ ಅಭಿವೃದ್ಧಿಶೀಲ ರಾಷ್ಟ್ರಗಳಿಗೆ ಕೈಗಾರಿಕಾಭಿವೃದ್ಧಿ ಹೊಂದಿದ ರಾಷ್ಟ್ರಗಳಿಂದ ಅವುಗಳ ಸ್ಥೂಲ ರಾಷ್ಟ್ರೀಯ ಉತ್ಪನ್ನದ ಸೇ. 0.32ರಷ್ಟು ಮಾತ್ರ ನೆರವು ಸಂದಿದೆ. ಆದ್ದರಿಂದ ಅಭಿವರ್ಧಿತ ಕೈಗಾರಿಕಾ ರಾಷ್ಟ್ರಗಳು ಬಡ ರಾಷ್ಟ್ರಗಳಿಗೆ ನೆರವನ್ನು ಬಹಳವಾಗಿ ಅಧಿಕಗೊಳಿಸಬೇಕಾಗಿದೆ. ಹಾಗೆ ಮಾಡಿದರೆ ಮಾತ್ರ ಆ ರಾಷ್ಟ್ರಗಳಲ್ಲಿಯ ಲೇಣೆ-ದೇಣೆ ಕೊರತೆ ಕಡಿಮೆಯಾಗುವುದು ಸಾಧ್ಯ.

ಎರಡನೆಯದಾಗಿ, ಅಂತರರಾಷ್ಟ್ರೀಯ ವ್ಯಾಪಾರದಲ್ಲಿ ಇನ್ನೂ ಮುಕ್ತ ನೀತಿಗಳನ್ನು ಅನುಸರಿಸುವುದು ಅಗತ್ಯ. ಈ ದಿಶೆಯಲ್ಲಿ ಕೈಗಾರಿಕಾ ರಾಷ್ಟ್ರಗಳು ಸದ್ಯದಲ್ಲಿ ಅನುಸರಿಸುತ್ತಿರುವ ಧೋರಣೆ ಖಂಡನೀಯ. ಅವು ತಮ್ಮ ಆಮದಿನ ಮೇಲೆ ಅತ್ಯಂತ ಹೆಚ್ಚಿನ ಸುಂಕವನ್ನು ಹೇರುತ್ತಿವೆ. ಬಡ ರಾಷ್ಟ್ರಗಳಿಂದ ಬರುವ ಆಮದಿಗೆ ಯಾವ ಆದ್ಯತೆಯೂ ದೊರೆಯುತ್ತಿಲ್ಲ. ಈ ಪರಿಸ್ಥಿತಿ ಬದಲಾಗಬೇಕು. ಅಭಿವೃದ್ಧಿ ಹೊಂದಿರುವ ರಾಷ್ಟ್ರಗಳು ಸುಂಕ ನಿರ್ಬಂಧಗಳನ್ನು ಕಡಿಮೆ ಮಾಡಬೇಕು ಮತ್ತು ಅನಭಿವರ್ಧಿತ ರಾಷ್ಟ್ರಗಳಿಂದ ಬರುವ ಆಮದಿಗೆ ಹೆಚ್ಚಿನ ಮಾನ್ಯತೆ ನೀಡಬೇಕು.

ಒಟ್ಟಿನಲ್ಲಿ ಅಭಿವರ್ಧಿತ ಮತ್ತು ಅಭಿವೃದ್ಧಿಶೀಲ ರಾಷ್ಟ್ರಗಳ ನಡುವೆ ಹೆಚ್ಚು ಸಹಕಾರ ಇಂದಿನ ತೀವ್ರ ಅಗತ್ಯಗಳಲ್ಲಿ ಒಂದು. ಹೀಗಾದಾಗ ಮಾತ್ರ ಅಂತರರಾಷ್ಟ್ರೀಯ ಹಣ ನಿಧಿಯ ನೀತಿಗಳು ಸಫಲಗೊಳ್ಳುವುದು ಸಾಧ್ಯ. ಮುಂದಿನ ವರ್ಷಗಳಲ್ಲಿ ಎಲ್ಲ ರಾಷ್ಟ್ರಗಳೂ ಏಕತೆಯಿಂದ ಅಂತರರಾಷ್ಟ್ರೀಯ ಬಿಕ್ಕಟ್ಟನ್ನು ಪರಿಹರಿಸಲು ಶ್ರಮಿಸದಿದ್ದರೆ ಈ ಬಿಕ್ಕಟ್ಟು ಇನ್ನೂ ತೀವ್ರಗೊಳ್ಳುವುದರಲ್ಲಿ ಸಂದೇಹವಿಲ್ಲ.

# ಬ್ಯಾಂಕುಗಳಲ್ಲಿ ಗ್ರಾಹಕರ ಸೇವೆ

ಎಚ್. ಬಿ. ರಾಮು

**ಬ್ಯಾಂಕುಗಳು ತಮ್ಮ ಗ್ರಾಹಕರಿಗೆ ಉತ್ತಮ ಸೇವೆ ಸಲ್ಲಿಸುತ್ತಿವೆಯೆ? ಎಂಬ ಪ್ರಶ್ನೆಯನ್ನು ಬ್ಯಾಂಕಿನವರ ದೃಷ್ಟಿಯಿಂದ ಇಲ್ಲಿ ವಿವೇಚಿಸಲಾಗಿದೆ**

ಪ್ರಸಿದ್ಧ ಅಮೆರಿಕನ್ ಹಾಸ್ಯ ಸಾಹಿತಿ ಮಾರ್ಕ್ ಟ್ವೇನ್ ಹೇಳಿರುವ ಹಾಗೆ, "ಪ್ರತಿಯೊಬ್ಬರೂ ಹವಾಮಾನದ ಬಗ್ಗೆ ಮಾತನಾಡುವವರೇ, ಆದರೆ ಯಾರೂ ಏನೂ ಮಾಡುವುದಿಲ್ಲ." ಅದೇ ರೀತಿ ನೊಂದ ಬ್ಯಾಂಕ್ ಗ್ರಾಹಕರು ಹೇಳಬಹುದು! "ಎಲ್ಲರೂ ಬ್ಯಾಂಕುಗಳ ಗ್ರಾಹಕರ ಸೇವೆಯನ್ನು ಕುರಿತು ಮಾತನಾಡುವವರೇ, ಆದರೆ ಯಾರೂ ಏನೂ ಮಾಡುತ್ತಿಲ್ಲ." ಇದು ನಿಜವೆ ? ಈ ದಿಶೆಯಲ್ಲಿ ಬ್ಯಾಂಕುಗಳು ಸೃಜನಾತ್ಮಕ ಕಾರ್ಯವನ್ನೇನೂ ಮಾಡುತ್ತಿಲ್ಲವೆ? ಮಾಡುತ್ತಿವೆ. ಉದಾಹರಣೆಗೆ: ಟೆಲ್ಲರ್ ಪದ್ಧತಿ, ಕೆಲವು ಗ್ರಾಹಕರಿಗೆ ರೂ. 2,500ದ ವರೆಗಿನ ಮೌಲ್ಯದ ಚೆಕ್ಕುಗಳನ್ನು ಬೇರೆ ಶಾಖೆಗಳಿಂದ ತರಿಸಿ ಕೊಡುವುದರ ಬದಲು ತತ್‌ಕ್ಷಣ ಅವರ ಖಾತೆಗೆ ಜಮಾ ಕೊಡುವುದು, ನಮೂನೆಗಳನ್ನು ಸರಳ ಮಾಡುವುದು ಮತ್ತು ಅವನ್ನು ಪ್ರಾದೇಶಿಕ ಭಾಷೆಗಳಿಗೆ ತರ್ಜುಮೆ ಮಾಡಿ ಉಪಯೋಗಿಸುವುದು, ಮುಂತಾದ ಎಲ್ಲವೂ ಇತ್ತೀಚಿನ ಸುಧಾರಣೆಗಳಾಗಿವೆ. ಅಲ್ಲದೆ ಬ್ಯಾಂಕುಗಳು ಸಂಪ್ರದಾಯಶರಣರಾಗದೆ ಸರ್ವತೋಮುಖವಾದ ಸಾಮಾಜಿಕ ಪ್ರಗತಿಯನ್ನು ಸಾಧಿಸುವ ಗುರಿ ಹೊಂದಿವೆ,

ಹೀಗಿದ್ದರೂ ಆಗಾಗ್ಗೆ ಗ್ರಾಹಕರಿಂದ ಅತೃಪ್ತಿಯ ದೂರುಗಳೇಕೆ ಬರುತ್ತಿವೆ? ವಾಸ್ತವಾಂಶವೆಂದರೆ, ಗ್ರಾಹಕರ ಆವಶ್ಯಕತೆಗಳು ಮತ್ತು ಬ್ಯಾಂಕ್‌ಗಳಿಂದ ಹಾಗೂ ಅವುಗಳ ಸಿಬ್ಬಂದಿಯಿಂದ ಹೆಚ್ಚು ಹೆಚ್ಚು ನಿರೀಕ್ಷಿಸಲಾಗುತ್ತಿದೆ. ಬ್ಯಾಂಕುಗಳು ಹಾಗೂ ಅವುಗಳ ನೌಕರವರ್ಗ ಎಷ್ಟುಮಾಡಿದರೂ ಅವು ಜನತೆಯ ನಿರೀಕ್ಷೆಯ ಮಟ್ಟವನ್ನು ಮುಟ್ಟಲಾಗುತ್ತಿಲ್ಲ. ಇದೊಂದು ಮರೀಚಿಕೆ. ಬ್ಯಾಂಕು ಗ್ರಾಹಕರನ್ನು ನೂರಕ್ಕೆ ನೂರರಷ್ಟು ತೃಪ್ತಿಪಡಿಸುವಂಥ ಪರಿಪೂರ್ಣ ವ್ಯವಸ್ಥೆ ಪ್ರಾಯಶಃ ಇರಲಾರದು, ಬರಲಾರದು.

ಹಾಗೆಂದು ಬ್ಯಾಂಕುಗಳು ಕೈಕಟ್ಟಿ ಕುಳಿತುಕೊಳ್ಳಲಾಗದು. ಮೂರು ನಾಲ್ಕು ದಶಕಗಳ ಹಿಂದೆ ಇದ್ದ ಮಾರುವವರ ಮಾರುಕಟ್ಟೆ ಈಗಿಲ್ಲ. ಈಗಿರುವುದು, ಬೆಳೆಯುತ್ತ ಬಲಿಯುತ್ತ ಇರುವುದು, ಕೊಂಡುಕೊಳ್ಳುವವರ, ಅಂದರೆ ಗ್ರಾಹಕರ, ಮಾರುಕಟ್ಟೆ. ಈ ಸತ್ಯಾಂಶವನ್ನು ಬ್ಯಾಂಕುಗಳು ಮತ್ತು ಅವುಗಳ ಸಿಬ್ಬಂದಿಗಳು ಎಷ್ಟು ಚೆನ್ನಾಗಿ ಅರಿತುಕೊಳ್ಳುತ್ತವೆಯೋ ಅಷ್ಟೂ ಒಳ್ಳೆಯದು. ಅರಿವೇ ಅನುಷ್ಠಾನಕ್ಕೆ ಮಾರ್ಗದರ್ಶಕ. ಅರಿತು, ನುರಿತು ತಮ್ಮ ನಡೆ-ನುಡಿಗಳಲ್ಲಿ ವ್ಯವಹಾರಗಳಲ್ಲಿ ಸೇವಾ ಮನೋಭಾವವನ್ನು ರೂಢಿಸಿಕೊಳ್ಳುವುದು ಸರ್ವರಿಗೂ ವಿಹಿತ.

ಬ್ಯಾಂಕುಗಳು ಸೇವಾಪ್ರಧಾನವಾದ ಕೈಗಾರಿಕೆಗಳು. ಜೀವ ವಿಮಾ ಕಾರ್ಪೊರೇಷನ್, ಅಂಚೆ ಮತ್ತು ತಂತಿ ಇಲಾಖೆ, ರೈಲ್ವೆಗಳು ಮತ್ತು ರಾಜ್ಯ ರಸ್ತೆ ಸಾರಿಗೆ ಕಾರ್ಪೊರೇಷನ್‌ಗಳು ಸಹ ಇದೇ ವರ್ಗಕ್ಕೆ ಸೇರಿದುವು. ಆದರೆ ಒಂದು ಬಹು ಮುಖ್ಯವಾದ ವ್ಯತ್ಯಾಸವೇನೆಂದರೆ, ಬ್ಯಾಂಕಿಂಗ್ ಉದ್ಯಮದಲ್ಲಿರುವ ಸ್ಪರ್ಧಾಮನೋಭಾವ ಈ ಉದ್ಯಮಗಳಲ್ಲಿಲ್ಲ. ಆದುದರಿಂದಲೇ, ಈ ಉದ್ಯಮಗಳು ವ್ಯವಹರಿಸುತ್ತಿರುವ ರೀತಿಯನ್ನು ಕುರಿತು ಸಾರ್ವಜನಿಕರಿಂದ ಅನೇಕಾನೇಕ ಟೀಕೆಗಳು ಪುಂಖಾನುಪುಂಖವಾಗಿ ಬರುತ್ತಿದ್ದರೂ, ಸುಧಾರಣೆಗಳು ಮಾತ್ರ ಬಸವನ ಹುಳುವಿನ ವೇಗದಲ್ಲಿ ಸಾಗುತ್ತಿವೆ. ಇವುಗಳ ಗ್ರಾಹಕರು ಈ ಬಗ್ಗೆ ಪತ್ರಿಕೆಗಳಲ್ಲಿ ಮತ್ತು ಬೇರೆ ವೇದಿಕೆಗಳ ಮೇಲೆ ದೂರಿ ದೂರಿ ನಿಸ್ತೇಜರಾಗಿದ್ದಾರೆ. ಈ ಸಂಸ್ಥೆಗಳು ನೀಡಿದ್ದನ್ನು ಗ್ರಾಹಕರೂ/ಪ್ರಯಾಣಿಕರೂ ಅನುಭವಿಸಬೇಕು.

ಇದಕ್ಕೆ ವಿರುದ್ಧವಾದ ಸನ್ನಿವೇಶ ಬ್ಯಾಂಕಿಗ್ ಉದ್ದಿಮೆಯಲ್ಲಿದೆ. ಕಾರಣ, ಸೇಕಡ 90ರಷ್ಟು ಬ್ಯಾಂಕಿಂಗ್ ವ್ಯವಹಾರ ಇಂದು ಸಾರ್ವಜನಿಕ ಕ್ಷೇತ್ರದಲ್ಲಿರುವ 28 ರಾಷ್ಟ್ರೀಕೃತ ಬ್ಯಾಂಕುಗಳಲ್ಲಿದ್ದರೂ, ಅವುಗಳ ಮಧ್ಯೆ ಮತ್ತು ಇತರ ಖಾಸಗಿ ಮತ್ತು ವಿದೇಶಿ ಬ್ಯಾಂಕುಗಳ ನಡುವೆ ಸ್ಪರ್ಧೆ ದಿನೇದಿನೇ ಪ್ರಬಲವಾಗುತ್ತಿದೆ. ತತ್ಪರಿಣಾಮವಾಗಿ

ಬ್ಯಾಂಕುಗಳು ತಮ್ಮ ವ್ಯಾವಹಾರಿಕ ರೀತಿ-ನೀತಿಗಳನ್ನು ಮತ್ತು ಗ್ರಾಹಕರ ಬಗ್ಗೆ ಇರುವ ಧೋರಣೆಗಳನ್ನು ಬದಲಾಯಿಸುತ್ತಿವೆ. ಹಿಂದೆ ಬ್ಯಾಂಕುಗಳನ್ನು ಹುಡುಕಿಕೊಂಡು ಗ್ರಾಹಕರು ಅಲೆಯಬೇಕಾಗುತ್ತಿತ್ತು. ಆದರೆ ಈಗ ಗ್ರಾಹಕರನ್ನು ಅಂದರೆ ವಿಶೇಷತಃ ಠೇವಣಿದಾರರನ್ನು ಹುಡುಕಿಕೊಂಡು ಬ್ಯಾಂಕುಗಳು ಅಲೆಯಬೇಕಾಗಿದೆ. ವಿಪರೀತ ಸ್ಪರ್ಧೆಯ ಪರಿಸರದಲ್ಲಿ ಬ್ಯಾಂಕುಗಳ ಇರುವಿಕೆಯೇ ಈಗ ಗಂಡಾಂತರದಲ್ಲಿದೆ. ಬ್ಯಾಂಕುಗಳಾದರೂ ಎಷ್ಟು ದಿಕ್ಕಿನಿಂದ ತಾನೇ ಸ್ಪರ್ಧೆಯನ್ನು ಎದುರಿಸಬಲ್ಲವು? ಜೀವವಿಮಾ ಕಾರ್ಪೊರೇಷನ್, ಅಂಚೆ ಇಲಾಖೆಯ ಉಳಿತಾಯ ವಿಭಾಗ, ಯೂನಿಟ್ ಟ್ರಸ್ಟ್ ಆಫ್ ಇಂಡಿಯ, ಠೇವಣಿ ಸ್ವೀಕರಿಸುವ ಕಂಪನಿಗಳು, ಚಿಟ್ ಫಂಡುಗಳು, ಷೇರು ಮಾರುಕಟ್ಟೆ, ಬಂಗಾರದ ಬಗೆಗಿರುವ ಜನತೆಯ ವ್ಯಾಮೋಹ, ಹಣದುಬ್ಬರದ ಈ ಕಾಲದಲ್ಲಿ ಉಳಿತಾಯ ಮಾಡಿದ್ದನ್ನು ಭೂಮಿ ಸೈಟು ಇಲ್ಲವೇ ಕಟ್ಟಡಗಳಲ್ಲಿ ತೊಡಗಿಸುವ ಜನರ ಹಂಬಲ —ಈ ಎಲ್ಲ ದಿಕ್ಕಿನಿಂದ ಪೈಪೋಟಿ ಉಂಟು.

ಪರಿಸ್ಥಿತಿ ಹೀಗಿದ್ದರೂ ಬ್ಯಾಂಕುಗಳ ಶಾಖಾಜಾಲ, ಠೇವಣಿಗಳು, ಸಾಲ ನೀಡುವಿಕೆ, ಲಾಭ, ಸಿಬ್ಬಂದಿ ಸಂಖ್ಯೆ ಮತ್ತು ಅವರ ಸೌಲಭ್ಯಗಳು/ಸವಲತ್ತುಗಳು ವರ್ಧಿಸುತ್ತಲೇ ಇವೆ. ಈ ಉದ್ದಿಮೆಯಲ್ಲಿರುವ ವೇತನ ಮಟ್ಟ ಮತ್ತು ಭದ್ರತೆ ಬಹು ಆಕರ್ಷಕ. ಬಡ್ತಿಯೂ ಶೀಘ್ರವಾಗಿ ಸಿಗುವುದು. ಈ ಎಲ್ಲ ಕಾರಣಗಳಿಂದಾಗಿ ಸಮಾಜದ ಎಲ್ಲ ವರ್ಗಗಳ ಸುಶಿಕ್ಷಿತ ಯುವಕ-ಯುವತಿಯರು ಬ್ಯಾಂಕ್ ಉದ್ದಿಮೆಯನ್ನು ಸೇರಲು ಹಾತೊರೆಯುತ್ತಾರೆ. ಅಂತೆಯೇ ಸಮಾಜದ ಇತರ ವರ್ಗಗಳು ಬ್ಯಾಂಕ್ ನೌಕರರನ್ನು ಅದೃಷ್ಟಶಾಲಿಗಳೆಂದು ಪರಿಗಣಿಸುವುದು. ಈ ದೃಷ್ಟಿಕೋನದಿಂದ ನೋಡಿದರೆ, ಸಾರ್ವಜನಿಕರು ಬ್ಯಾಂಕ್ ನೌಕರರ ವರ್ಗಗಳಿಂದ ವಿಶೇಷ ಸೇವೆ, ವಿಶೇಷವಾದ ನಡೆನುಡಿಗಳನ್ನು ನಿರೀಕ್ಷಿಸುವುದು ನ್ಯಾಯವೇ ಆಗಿದೆ. ಆದರೆ ಇತ್ತೀಚೆಗೆ ಗ್ರಾಹಕರಿಂದ ಬರುತ್ತಿರುವ ದೂರುಗಳನ್ನು ಪರಿಶೀಲಿಸಿದರೆ ಹೊರಬೀಳುವ ಅಂಶಗಳೇ ಬೇರೆ. ಆಗಾಗ್ಗೆ ಮುಷ್ಕರಗಳು, ವಿಳಂಬ, ಬೇಕೆಂತಲೇ ಕೆಲಸಗಳನ್ನು ನಿಧಾನವಾಗಿ ಮಾಡುವುದು, ತಪ್ಪುಗಳು, ಅಸಹಕಾರ ಮತ್ತು ಅಲ್ಲಲ್ಲಿ ಅಸೌಜನ್ಯ. ಹೀಗೇಕೆ? ಬ್ಯಾಂಕ್ ನೌಕರರನ್ನು ಅದೃಷ್ಟಶಾಲಿಗಳೆಂದು ಎಣಿಸಿರುವ ಸಾರ್ವಜನಿಕರು ಇಂಥ ಸನ್ನಿವೇಶಗಳಲ್ಲಿ ಬ್ಯಾಂಕ್ ನೌಕರರನ್ನು ಖಂಡಿಸುವುದುಂಟು. ನೊಂದ ಗ್ರಾಹಕರೊಬ್ಬರು ಹೇಳುತ್ತಿದ್ದರು: "ವಸೂಲಿಗಾಗಿ ನಾನು ಕಳಿಸಿದ ಹುಂಡಿ ಒಂದು ನೂರು ಕಿಮಿ. ದೂರವಿರುವ ಮತ್ತೊಂದು ಶಾಖೆಗೆ ಹೋಗಿ ಬಂದು ನನ್ನ ಖಾತೆಗೆ ಜಮಾ ಆಗಬೇಕಾದರೆ ಒಂದು ತಿಂಗಳಾಯಿತು. ಅಮೆರಿಕನ್ ಗಗನ ಯಾತ್ರಿಗಳೇ ಕೇವಲ 22–23 ದಿನಗಳಲ್ಲಿ ಚಂದ್ರಲೋಕಕ್ಕೆ ಹೋಗಿ ಹಿಂದಿರುಗಿದರು!"

1977ರಲ್ಲಿ ಪ್ರಕಟವಾದ, "ಬ್ಯಾಂಕುಗಳಲ್ಲಿ ಗ್ರಾಹಕರಿಗೆ ಸೇವೆ ಒದಗಿಸುವುದನ್ನು ಕುರಿತು ಅಧ್ಯಯನ ತಂಡದ ಅಂತಿಮ ವರದಿ" ಬ್ಯಾಂಕುಗಳಲ್ಲಿ ಸೇವಾಮಟ್ಟವನ್ನು ಏರಿಸುವ ದಿಶೆಯಲ್ಲಿ ಒಂದು ಮೈಲಿಗಲ್ಲು. 176 ಶಿಫಾರಸುಗಳನ್ನು ಒಳಗೊಂಡ ಈ ವರದಿಯ ಬಹುಪಾಲನ್ನು, ಅಂದರೆ 117 ಶಿಫಾರಸುಗಳನ್ನು, ಭಾರತೀಯ ಸ್ಟೇಟ್ ಬ್ಯಾಂಕ್ ಈಗಾಗಲೇ ಅನುಷ್ಠಾನಕ್ಕೆ ತಂದಿದೆ. ಇತರ ಬ್ಯಾಂಕುಗಳೂ ಈ ದಿಶೆಯಲ್ಲಿ ಮುನ್ನಡೆದಿವೆ. ಲಾಭಪ್ರದತೆ ಮತ್ತು ಅಭಿವೃದ್ಧಿ ಇವು ಸಾಮಾನ್ಯವಾಗಿ ಎಲ್ಲ ಸಂಸ್ಥೆಗಳ ಧ್ಯೇಯೋದ್ದೇಶ. ಆದರೆ ಈ ಸಮಿತಿಯ ಶಿಫಾರಸಿನ ಪ್ರಕಾರ ಪ್ರತಿಯೊಂದು ಬ್ಯಾಂಕೂ ತನ್ನ ಧ್ಯೇಯೋದ್ದೇಶಗಳ ಜೊತೆಗೆ "ಗ್ರಾಹಕ ಸೇವೆ" ಯನ್ನೂ ಸೇರಿಸಿಕೊಳ್ಳಬೇಕು.

ಗ್ರಾಹಕರ ಸೇವೆ ನಿಜವಾಗಿಯೂ ಕಷ್ಟಕರವಾದ ಸೇವೆ. ಆದರೆ ಈ ದಿಶೆಯಲ್ಲಿ ಬ್ಯಾಂಕುಗಳು ಟೊಂಕಕಟ್ಟಿ ದಿಟ್ಟ ಹೆಜ್ಜೆಯನ್ನಿಟ್ಟಿವೆ. ಎಲ್ಲ ವರ್ಗಗಳ ಬ್ಯಾಂಕ್ ಸಿಬ್ಬಂದಿಗೆ ಈ ಕ್ಷೇತ್ರದಲ್ಲಿ ಸೂಕ್ತ ತರಬೇತಿಯನ್ನು ಕೊಡಲಾಗುತ್ತಿದೆ. "ಗ್ರಾಹಕನೇ ರಾಜ", "ಎಂದೆಂದೂ ಗ್ರಾಹಕನೇ ಸರಿ". "ನಾವಿರುವುದು ಅವನಿಗಾಗಿಯೇ, ಅವನಿರುವುದು ನಮಗಲ್ಲ" —ಇತ್ಯಾದಿ ಘೋಷಣೆಗಳು ಬ್ಯಾಂಕ್ ವಲಯಗಳಲ್ಲಿ ಕೇಳಬರುತ್ತಿವೆ. ಅಷ್ಟೇ ಅಲ್ಲ. ಅವುಗಳ ಸ್ಫೂರ್ತಿಯನ್ನು ಮೈಗೂಡಿಸಿಕೊಂಡು ವ್ಯವಹರಿಸುತ್ತಿವೆ. ಈ ದೃಷ್ಟಿಯಿಂದ ಹೇಳುವುದಾದರೆ, ಬ್ಯಾಂಕ್ ಉದ್ದಿಮೆಯಿಂದ ಜನತೆ ಇನ್ನೂ ಉತ್ತಮವಾದ, ಪ್ರಥಮ ದರ್ಜೆಯ ಸೇವೆಯನ್ನು ಭವಿಷ್ಯದಲ್ಲಿ ನಿರೀಕ್ಷಿಸಬಹುದು.

# ಬ್ಯಾಂಕುಗಳು ಹಾಗೂ ಗ್ರಾಹಕ-ಸಾರ್ವಜನಿಕ ಸೇವೆ

**ಮೂಲ: ಎಂ. ಆರ್. ಪೈ**
**ಅನುವಾದ: ಜಿ. ಎಸ್. ನರಸಿಂಹಮೂರ್ತಿ**

**ಬ್ಯಾಂಕುಗಳು ಗ್ರಾಹಕರಿಗೆ ಸಲ್ಲಿಸುತ್ತಿರುವ ಸೇವೆ ಸಮರ್ಪಕವಾಗಿದೆಯೆ ಎಂಬುದನ್ನು ಗ್ರಾಹಕರೊಬ್ಬರು ಇಲ್ಲಿ ವಿವೇಚಿಸಿದ್ದಾರೆ**

ಇತ್ತೀಚಿನ ವರ್ಷಗಳಲ್ಲಿ ಬ್ಯಾಂಕಿಂಗ್ ಉದ್ಯಮದ ಪ್ರಗತಿಯನ್ನು ಬ್ಯಾಂಕುಗಳ ಶಾಖಾ ವಿಸ್ತರಣೆಯಿಂದ, ಅಥವಾ ಒಂದು ಬ್ಯಾಂಕ್ ಸೇವೆ ಸಲ್ಲಿಸುವ ಜನಸಂಖ್ಯೆಯಿಂದ ವಿವರಿಸಲಾಗುತ್ತಿದೆ. ಉದಾಹರಣೆಗೆ ಕಳೆದ ಆರುವರ್ಷಗಳಲ್ಲಿ ಬ್ಯಾಂಕುಗಳ ಶಾಖೆಗಳ ಸಂಖ್ಯೆ ದ್ವಿಗುಣವಾಗಿದೆ. ಮತ್ತು ಒಂದು ಶಾಖೆ ಸೇವೆ ಸಲ್ಲಿಸುತ್ತಿದ್ದ ಜನಸಂಖ್ಯೆ 65,000 ದಿಂದ 29,000ಕ್ಕೆ ಇಳಿದಿದೆ. ಇವಿಷ್ಟರಿಂದ ಬ್ಯಾಂಕಿಂಗ್ ಉದ್ಯಮ ಪ್ರಗತಿಹೊಂದಿದೆ ಎಂದಾಗುವುದಿಲ್ಲ.

ಬ್ಯಾಂಕಿಂಗ್ ಪ್ರಗತಿಯ ಮೊದಲ ಅಳತೆಗೋಲೆಂದರೆ ದೇಶದಲ್ಲಿರುವ ಒಟ್ಟು ಹಣಕ್ಕೂ ಚಲಾವಣೆಯಲ್ಲಿರುವ ಹಣಕ್ಕೂ ಇರುವ ಅನುಪಾತ. ಬ್ಯಾಂಕಿಂಗ್ ಪ್ರವೃತ್ತಿ ಜನರಲ್ಲಿ ಹೆಚ್ಚು ಹೆಚ್ಚು ಬೆಳೆದ ಹಾಗೆಲ್ಲ ಹಣದ ಚಲಾವಣೆ ಕಡಿಮೆಯಾಗುತ್ತದೆ. ಇಂತಹ ಬದಲಾವಣೆ ನಮ್ಮ ದೇಶದಲ್ಲಿ ಅಷ್ಟಾಗಿ ಗೋಚರಿಸಿಲ್ಲ. 1971–72ರಿಂದ 1974–75ರ ವರೆಗಿನ ಅವಧಿಯಲ್ಲಿ ಹಣದ ಚಲಾವಣೆ ಕೇವಲ 3% ಮಾತ್ರ ಕಡಿಮೆಯಾಗಿದೆ.

ಬ್ಯಾಂಕಿಂಗ್ ಪ್ರಗತಿಯ ಎರಡನೆಯ ಅಳತೆಯೆಂದರೆ ಬ್ಯಾಂಕುಗಳ ಬಗ್ಗೆ ಅವುಗಳ ಗ್ರಾಹಕರಲ್ಲಿ ಹಾಗೂ ಸಾರ್ವಜನಿಕರಲ್ಲಿ ಇರುವ ಸದಭಿಪ್ರಾಯಗಳು ಮತ್ತು ಅವು ಸಲ್ಲಿಸುವ ಸೇವೆಯ ಮಟ್ಟ. ಈ ದಿಸೆಯಲ್ಲಿ ಭಾರತೀಯ ಬ್ಯಾಂಕುಗಳು ಎಲ್ಲ ಮೂಲಗಳಿಂದಲೂ ತಕ್ಕಮಟ್ಟಿಗೆ ತೀವ್ರವಾದ ಟೀಕೆಗೆ ಒಳಗಾಗಿವೆ.

ಒಂದು ಉದಾಹರಣೆ ಎಂದರೆ ಶ್ರೀ ಎಂ. ಎಸ್. ಜಾಧವ್ (ಬೊಂಬಾಯಿಯ ನ್ಯಾಯಾಧೀಶರು) ಅವರು 16–9–1975ರ "ಟೈಮ್ಸ್ ಆಫ್ ಇಂಡಿಯಾ" ಸಂಚಿಕೆಯಲ್ಲಿ ಪ್ರಕಟವಾದ ವರದಿಯಲ್ಲಿ ಹೀಗೆಂದಿದ್ದಾರೆ:

"ಬ್ಯಾಂಕ್ ರಾಷ್ಟ್ರೀಕರಣದ ಅನಂತರ ಬ್ಯಾಂಕುಗಳಲ್ಲಿ ಅಶಿಸ್ತು ಮತ್ತು ಅದಕ್ಷತೆ ಹೆಚ್ಚಿದೆ. ಬ್ಯಾಂಕ್ ನೌಕರರು ತಮ್ಮ ಜವಾಬ್ದಾರಿಗಳಿಗಿಂತ ಹಕ್ಕುಗಳ ಬಗ್ಗೆ ಅನಾವಶ್ಯಕವಾದ ಪ್ರಜ್ಞೆಯನ್ನು ಹೊಂದಿದ್ದಾರೆ. ಅವಿಧೇಯತೆ ಮತ್ತು ನಿಷ್ಠೆಯ ಕೊರತೆ—ಇವು ಯಾವ ಬ್ಯಾಂಕ್ ತಮ್ಮ ಜೀವನದ ದಾರಿಯೋ ಅದಕ್ಕೆ ದಿನನಿತ್ಯದ ನಿಯಮಗಳಾಗಿವೆ."

ರಿಸರ್ವ್ ಬ್ಯಾಂಕಿನ ಗವರ್ನರುಗಳಲ್ಲೊಬ್ಬರಾದ ಶ್ರೀ ಎನ್. ಸಿ. ಸೇನ್‌ಗುಪ್ತರವರು ಸಹ ಬ್ಯಾಂಕುಗಳಲ್ಲಿ ಇಳಿಮುಖವಾಗುತ್ತಿರುವ ಸೇವಾಮಟ್ಟದ ಬಗ್ಗೆ ಒಮ್ಮೆ ಖಂಡನೀಯವಾಗಿ ಮಾತನ್ನಾಡಿದ್ದಾರೆ. ಅವರು, ಬ್ಯಾಂಕುಗಳ ವಿಸ್ತರಣೆ ಅಥವಾ ಠೇವಣಿಗಳ ಹೆಚ್ಚಳದಿಂದ ಬ್ಯಾಂಕುಗಳ ಸಾಧನೆ ಯಾಗುವುದಿಲ್ಲ ಎಂದಿದ್ದಾರೆ.

ಸೌಭಾಗ್ಯವಶಾತ್ ಬ್ಯಾಂಕುಗಳು ಈ ಕೊರತೆಯನ್ನು ಗುರುತಿಸುತ್ತಿವೆ. ಪ್ರಮುಖ ರಾಷ್ಟ್ರೀಕೃತ ಬ್ಯಾಂಕೊಂದರ ಜನರಲ್ ಮ್ಯಾನೇಜರರು 1975ರ ಮೇನಲ್ಲಿ ಹೊರಡಿಸಿದ ಬುಲೆಟಿನ್ ಒಂದರಲ್ಲಿ ಹೀಗೆ ಹೇಳಿದ್ದಾರೆ: "ಬ್ಯಾಂಕುಗಳು ನೀಡುತ್ತಿರುವ ಸೇವಾಮಟ್ಟದ ಇಳಿತದ ಬಗ್ಗೆ ಇರುವ ಸಾರ್ವಜನಿಕ ಅಭಿಪ್ರಾಯವನ್ನು ಬ್ಯಾಂಕಿನ ಎಲ್ಲ ನೌಕರರೂ, ಅದರಲ್ಲೂ ರಾಷ್ಟ್ರೀಕೃತ ಬ್ಯಾಂಕಿನವರು, ತೀವ್ರವಾಗಿ ಗಮನಿಸಬೇಕಾಗಿದೆ."

ಭಾರತೀಯ ಬ್ಯಾಂಕುಗಳ ಸಂಸ್ಥೆ ಕೂಡ ಗ್ರಾಹಕರ ಅಸಮಾಧಾನವನ್ನು ಗುರುತಿಸಿ "ಶಾಖಾಧಿಕಾರಿ" (ದಿ ಬ್ರ್ಯಾಂಚ್ ಮ್ಯಾನೇಜರ್) ಎಂಬ ವಾರ್ತಾಪತ್ರದಲ್ಲಿ ಹೀಗೆಂದಿದೆ: 'ಸೇವೆ' ಬಹಳ ಕೆಳಮಟ್ಟದಲ್ಲಿದೆಯೆಂದು ಗ್ರಾಹಕ ಸಾರ್ವಜನಿಕ ಸೇವೆಯ ಅಧ್ಯಯನ ಸಮಿತಿ ತನ್ನ

ವಿವರವಾದ ಅಧ್ಯಯನದಿಂದ ಖಚಿತವಾಗಿ ತಿಳಿಸಿದೆ. ಇದಕ್ಕೆಲ್ಲ ಹಲವಾರು ಕಾರಣಗಳಿರಬಹುದು. ಅದೇನೇ ಇರಲಿ, ಈ ಬಗ್ಗೆ ಸಾರ್ವಜನಿಕ ಅಭಿಪ್ರಾಯ ದಿನೇದಿನೇ ಹದಗೆಡುತ್ತಿದೆ. ಈಗ ಬ್ಯಾಂಕುಗಳು ಸೇವೆಯ ಗುಣಮಟ್ಟವನ್ನು ಹೆಚ್ಚಿಸಬೇಕಾಗಿದೆ.

ಈ ಸಮಸ್ಯೆಯ ಬಗ್ಗೆ ಹೆಚ್ಚು ಹೇಳುವ ಅವಶ್ಯಕತೆಯಿಲ್ಲ. ಆದರೆ ಈ ಸಂದರ್ಭದಲ್ಲಿ ಗ್ರಾಹಕರ ಸೇವೆಯ ಬಗ್ಗೆ ಇರುವ ಟೀಕೆಗಳ ಮೂಲದ ಬಗ್ಗೆ ಕೇಳಿಬರುವ ತಪ್ಪು ಕಲ್ಪನೆಯ ಮಾತುಗಳನ್ನು ವಿವೇಚಿಸಬೇಕಾಗಿದೆ. ಉದಾಹರಣೆಗೆ ಟೀಕೆಗಳು ಕೇವಲ ಪಟ್ಟಭದ್ರ ಹಿತಾಸಕ್ತಿಗಳಿಂದಲೋ ಉನ್ನತ ವರ್ಗದಿಂದಲೋ ಬರುತ್ತಿವೆ ಎಂದು ಹೇಳಲಾಗುತ್ತಿದೆ. ಆದರೆ ಬ್ಯಾಂಕುಗಳನ್ನು ಸಮಾಜದ ವಿವಿಧ ಸ್ತರಗಳ ವಿವಿಧ ಕ್ಷೇತ್ರಗಳ ಜನ ಬಳಸುತ್ತಾರಾಗಿ, ಬ್ಯಾಂಕುಗಳು ಕೇವಲ ಕೆಲವರಿಗೆ ಸೀಮಿತವಾಗಿಲ್ಲ. ಟೀಕೆಗಳು ಕೆಲವು ಜನರಿಂದ ಬಂದಿದ್ದರೂ ಮಿಕ್ಕ ಜನರು ತೊಂದರೆಯನ್ನು ಮೂಕವಾಗಿ ಅನುಭವಿಸುತ್ತಿರುತ್ತಾರೆಂಬುದು ಸತ್ಯ. ಪ್ರಜಾಸತ್ತೆಯಲ್ಲಿ ಯಾವುದೇ ಒಂದು ಗುಂಪು ತನ್ನ ಹಿತಾಸಕ್ತಿಯನ್ನು ಕಾಪಾಡಿಕೊಳ್ಳಲು, ಅದನ್ನು ಅನೂಚಾನವಾಗಿ ಕಾಪಾಡಿಕೊಳ್ಳಲು, ಸಂಘಟಿತ ಪ್ರಯತ್ನ ನಡೆಸುವುದು ಅದರ (ಗುಂಪಿನ) ಹಕ್ಕಾಗಿರುತ್ತದೆ. ಉದಾ: ಬ್ಯಾಂಕುಗಳ ಹಿತಾಸಕ್ತಿಯನ್ನು ಕಾಪಾಡಲು ಭಾರತೀಯ ಬ್ಯಾಂಕುಗಳ ಸಂಘ ಹಾಗೂ ಕಾರ್ಮಿಕರ ಹಿತಾಸಕ್ತಿಯನ್ನು ಕಾಪಾಡಲು ಅವರದೇ ಆದ ಒಕ್ಕೂಟಗಳಿಲ್ಲವೆ? ಹೀಗಿರುವಾಗ ಬ್ಯಾಂಕುಗಳ ಠೇವಣಿದಾರರರೋ, ಋಣಿಗಳೋ ಬ್ಯಾಂಕಿನ ಗ್ರಾಹಕರಾಗಿ ತಮ್ಮದೇ ಒಂದು ಗುಂಪನ್ನು ವ್ಯವಸ್ಥಿತ ರೂಪದಲ್ಲಿ ಸಂಘಟಿಸಿಕೊಂಡರೆ ತಪ್ಪೇನು? ಅವರು ಬ್ಯಾಂಕುಗಳನ್ನು ದೂರಿದರೆ ಅವರು ಬ್ಯಾಂಕಿನಲ್ಲಿರುವ ತಮ್ಮ ಹಣದ ಮೌಲ್ಯವನ್ನು ಕೇಳಿದ ಹಾಗಾಗುತ್ತದೆಯೇ ಹೊರತು ಬೇರೇನೂ ಅಲ್ಲ. ಬ್ಯಾಂಕುಗಳ ಸೇವೆಯಲ್ಲಾಗಿರುವ ಅಪಮೌಲ್ಯ ರಾಷ್ಟ್ರೀಕರಣದ ಫಲ ಎಂದು ಅನೇಕ ವೇಳೆ ಹೇಳುವುದುಂಟು. ಆದರೆ ರಾಷ್ಟ್ರೀಕರಣದ ವಿಷಯ ಇಲ್ಲಿ ಅಪ್ರಸ್ತುತ. ಏಕೆಂದರೆ ಗ್ರಾಹಕರು, ಬ್ಯಾಂಕುಗಳು ಯಾರ ಅಧೀನದಲ್ಲಿವೆ ಎಂಬುದಕ್ಕಿಂತ, ತಮ್ಮ ಹಣ ಹಾಗೂ ತಮಗೆ ಸಿಕ್ಕುವ ಸೌಲಭ್ಯಗಳ ಬಗ್ಗೆ ಹೆಚ್ಚು ಗಮನ ಕೊಡುತ್ತಾರೆ.

### ಠೇವಣಿದಾರರ ಕೆಲವು ಸಮಸ್ಯೆಗಳು

ಠೇವಣಿದಾರರ ಕೆಲವು ಸಮಸ್ಯೆಗಳನ್ನು ಸ್ಥೂಲವಾಗಿ ಹೀಗೆ ವಿಂಗಡಿಸಬಹುದು: ಮೊತ್ತ ಮೊದಲಿಗೆ ಕೆಲವು ಸಾಮಾನ್ಯ ಸಂಗತಿಗಳು ಗ್ರಾಹಕರ ಅಸಮಾಧಾನಕ್ಕೆ ಕಾರಣವಾಗುತ್ತವೆ. ಉದಾ: ಬ್ಯಾಂಕುಗಳು ತಮ್ಮ ವ್ಯವಹಾರದ ವೇಳೆಯನ್ನು ಕಟ್ಟಡದ ಹೊರಗೆ ಕಾಣಿಸದಿರುವುದು. ಬ್ಯಾಂಕುಗಳು ಸಾಮಾನ್ಯವಾಗಿ ಇದನ್ನು ಕಟ್ಟಡದ ಒಳಗೆ ಕಾಣಿಸಿರುತ್ತವೆ. ಇದು ಕಾನೂನಿಗೆ ಅನುಗುಣವಾಗಿದೆ ಎಂಬುದು ಅವುಗಳ ವಾದ. ಬ್ಯಾಂಕ್ ವ್ಯವಹಾರದ ವೇಳೆಯನ್ನು ಬ್ಯಾಂಕು ಪ್ರಾರಂಭವಾಗುವ ಮುನ್ನ ಅಥವಾ ಮುಚ್ಚಿದ ಅನಂತರ ತಿಳಿಯಬಯಸುವ ಗ್ರಾಹಕನಿಗೆ ಇದರಿಂದ ಯಾವ ರೀತಿಯ ಪ್ರಯೋಜನವೂ ಆಗದು. ಬ್ಯಾಂಕ್ ಠೇವಣಿದಾರರ ಸಂಸ್ಥೆ ಈ ಅಂಶವನ್ನು ಭಾರತೀಯ ಬ್ಯಾಂಕುಗಳ ಸಂಘದ ಗಮನಕ್ಕೆ ತಂದಾಗ ಅದು ತನ್ನ ಸದಸ್ಯ ಬ್ಯಾಂಕುಗಳಿಗೆ, ವೇಳೆಯನ್ನು ಕಟ್ಟಡದ ಹೊರಗೆ ಕಾಣಿಸಲು ಆದೇಶವಿದ್ದ ಸುತ್ತೋಲೆಯೊಂದನ್ನು ಬಿಡುಗಡೆ ಮಾಡಿತು. ಆದರೆ ಕೇವಲ ಒಂದು ಬ್ಯಾಂಕ್ ಮಾತ್ರ ಈ ದಿಸೆಯಲ್ಲಿ ಕಾರ್ಯಪ್ರವೃತ್ತವಾಯಿತು. ಇದು ದುರದೃಷ್ಟದ ಸಂಗತಿ.

ಬ್ಯಾಂಕಿನಲ್ಲಿ ಪ್ರವೇಶಿಸಿದ ಅನಂತರ ತಕ್ಕ ಮಾಹಿತಿ ಸುಲಭವಾಗಿ ದೊರೆಯದಿರುವುದೂ ಸಾರ್ವಜನಿಕ ದೂರುಗಳಲ್ಲಿ ಒಂದು. ಅತ್ತಿಂದಿತ್ತ, ಇತ್ತಿಂದತ್ತ ಜನರು ತಮ್ಮ ಸಣ್ಣಪುಟ್ಟ ಕೆಲಸಕ್ಕಾಗಿ ಅಲೆದಾಡಬೇಕಾಗಿರುವುದು ವೇದ್ಯವಾದ ಸಂಗತಿ. ಇದರ ಮೇಲೆ ಕೆಲವು ಬ್ಯಾಂಕು ನೌಕರರು ತಮ್ಮ ಕರ್ತವ್ಯ ನಿರ್ವಹಣೆಗೆ ಭಂಗ ತರುವರೆಂದು ಸಾರ್ವಜನಿಕರ ಮೇಲೆ ಹರಿಹಾಯುವುದೂ ಉಂಟು. ಬ್ಯಾಂಕುಗಳು ತಮ್ಮ ದೊಡ್ಡದೊಡ್ಡ ಶಾಖೆಗಳಲ್ಲಿ ಒಬ್ಬ ಸ್ವಾಗತಕಾರನನ್ನೂ ಸ್ವಾಗತಕರ್ತೆಯನ್ನೂ ನೇಮಿಸಿಕೊಳ್ಳುವುದರಿಂದ ಇವೆಲ್ಲವನ್ನೂ ಸುಲಭವಾಗಿ ಪರಿಹರಿಸಬಹುದು. ಎಷ್ಟೋ ವೇಳೆ ಬ್ಯಾಂಕ್ ಸಿಬ್ಬಂದಿಗೇ ಬ್ಯಾಂಕ್ ನೀಡುವ ಸೌಲಭ್ಯದ ವಿವರಗಳು ತಿಳಿದಿಲ್ಲದಿರುವುದೂ ಸಾರ್ವಜನಿಕರಿಗೆ ಸಾಕಷ್ಟು ಗೊಂದಲವನ್ನುಂಟು ಮಾಡುವ ಅಂಶ. ಉದಾಹರಣೆಗೆ ಪ್ರಯಾಣಿಕರ ಚೆಕ್ಕುಗಳನ್ನು ತಮ್ಮ ಬ್ಯಾಂಕ್ ಆದರಿಸಿ ಹಣ ಪಾವತಿ ಮಾಡಬಹುದು ಎಂಬ ವಿಷಯ ಕೆಲವು ಬ್ಯಾಂಕ್ ನೌಕರರಿಗೆ ತಿಳಿದಿಲ್ಲವಾಗಿ ಪ್ರಯಾಣಿಕರು ಕಷ್ಟಪಡಬೇಕಾಗುತ್ತದೆ.

ಪಾಸ್ ಬುಕ್‌ಗಳನ್ನು ತುಂಬಿಕೊಡಲು ಆಗುವ ಅನಾವಶ್ಯಕ ವಿಳಂಬ, ಅಪೂರ್ಣ ಮತ್ತು ಸರಿಯಿಲ್ಲದ ಮಾಸಿಕ ತಃಖ್ತೆಗಳು (monthly statements) ಗ್ರಾಹಕರನ್ನು ಕಂಗೆಡಿಸುತ್ತವೆ.

ಇವೆಲ್ಲಕ್ಕಿಂತ ಮುಖ್ಯವಾಗಿ ಗ್ರಾಹಕರನ್ನು ಕಾಡುವ ಪ್ರಶ್ನೆಯೆಂದರೆ ಅನಧಿಕೃತವಾಗಿ ಸಾರ್ವಜನಿಕರ ಹಣವನ್ನು ಬ್ಯಾಂಕುಗಳು ತಮ್ಮ ಉಪಯೋಗಕ್ಕೆ ಬಳಸಿಕೊಳ್ಳುವುದು. ಡ್ರಾಫ್ಟ್‌ಗಳಿಗೆ ಹಣ ಪಾವತಿ ಮಾಡಲು ನಿರಾಕರಿಸುವುದು ಇದಕ್ಕೆ ಒಂದು ನಿದರ್ಶನ. ಸರಿಯಾದ ಸೂಚನೆಗಳು ತಮಗೆ ಬಂದಿಲ್ಲವೆನ್ನುವುದು ಬ್ಯಾಂಕುಗಳು ನೀಡುವ ಮುಖ್ಯ

ಕಾರಣ. ಸೂಚನೆ ಬಂದಿದೆಯೋ ಇಲ್ಲವೋ ಎನ್ನುವುದು ಬ್ಯಾಂಕಿನ ಆಂತರಿಕ ವಿಚಾರ. ತಮ್ಮ ಲೋಪಕ್ಕಾಗಿ ಗ್ರಾಹಕನಿಗೆ ತೊಂದರೆಯನ್ನುಂಟುಮಾಡುವುದು ಸರ್ವಥಾ ಸಲ್ಲದು. ಡ್ರಾಫ್ಟ್‌ಗಳನ್ನು ಪಾವತಿ ಮಾಡಲು ನಿರಾಕರಿಸುವುದಕ್ಕೆ ಬ್ಯಾಂಕಿನವರು ಒಡ್ಡುವ ಮತ್ತೊಂದು ಮುಖ್ಯ ಕಾರಣವೆಂದರೆ ಹಣ ಸಲ್ಲಬೇಕಾದ ವ್ಯಕ್ತಿಯ ಪರಿಚಯ ಬ್ಯಾಂಕಿಗಿಲ್ಲವಾಗಿ ಅವನನ್ನು ಗುರುತಿಸಲು ತಾನು ಅಸಮರ್ಥವಾಗಿರುವುದೆಂಬುದು.

ಬ್ಯಾಂಕಿನವರು ಇಲಾಖೆಯ ಗುರುತಿನ ಚೀಟಿಯನ್ನು ಒಪ್ಪಿಕೊಳ್ಳಬೇಕೆಂದು ಠೇವಣಿದಾರರ ಸಂಸ್ಥೆ ಸಲಹೆ ನೀಡಿತು. ಸಂಘದವರು ಬ್ಯಾಂಕುಗಳೇ ಪರಿಚಯ ಪತ್ರವನ್ನು ನೀಡಬೇಕೆಂದು ನಿರ್ದೇಶ ನೀಡಿದ್ದರು. ಯಾವುದನ್ನೂ ಬ್ಯಾಂಕುಗಳು ಒಪ್ಪಿಕೊಂಡಿಲ್ಲ. ಬ್ಯಾಂಕುಗಳು ಸಾರ್ವಜನಿಕರ ಹಣವನ್ನು ಬಳಸುವುದರಲ್ಲಿ ಉತ್ಸುಕವಾಗಿವೆ ಎಂಬ ಸಾರ್ವಜನಿಕರ ಅನುಮಾನಕ್ಕೆ ಈ ಅಂಶವೂ ಕಾರಣವಾಗಿದೆ.

ಚೆಕ್ಕುಗಳನ್ನು ಪಾವತಿ ಮಾಡುವಲ್ಲಿ ಆಗುವ ವಿಳಂಬ, ಸಮಸ್ಯೆಯ ಮತ್ತೊಂದು ಮುಖ್ಯ ಮೂಲ. ಯಾವ ಬಡ್ಡಿಯನ್ನೂ ನೀಡದೆ ಬ್ಯಾಂಕುಗಳು ವಿಲೇವಾರಿಯಾಗದ ಚೆಕ್ಕು ಹಣವನ್ನು ಅನುಭವಿಸುತ್ತವೆ. ಕಾನೂನಿನಂತೆ ಚೆಕ್ಕನ್ನು ಬ್ಯಾಂಕಿಗೆ ಸಲ್ಲಿಸಿದ 24 ವ್ಯವಹಾರ ಗಂಟೆಗಳೊಳಗಾಗಿ ಅದನ್ನು ಆದರಿಸಬೇಕಾಗಿದೆ. ಈ ಸಮಯಕ್ಕೆ ಅಂಚೆ ಇಲಾಖೆಯವರು ತೆಗೆದುಕೊಳ್ಳಬಹುದಾದ ಸಮಯವನ್ನೂ ನಾವು ಸೇರಿಸಬಹುದು. ಆದರೆ ಸಾಮಾನ್ಯವಾಗಿ ಒಂದು ಹೊರಗಿನ ಚೆಕ್ಕಿನ ಮೊಬಲಗನ್ನು ನಾವು ಪಡೆಯಬೇಕಾದರೆ ಎರಡರಿಂದ ನಾಲ್ಕು ವಾರಗಳು ಬೇಕಾಗುತ್ತದೆ. ಅಂದರೆ ಬ್ಯಾಂಕುಗಳು ಈ ಹಣವನ್ನು ಬಳಸಿಕೊಳ್ಳುತ್ತವೆ ಎಂದಾಯಿತು. ಎಷ್ಟು ಹಣ ಈ ಬಗೆಯಲ್ಲಿ ಅವಕ್ಕೆ ದೊರಕುವುದೋ ಅಷ್ಟು ಹಣವನ್ನು ಅವು ಅಂತರ ಬ್ಯಾಂಕ್ ಹಣ ಮಾರುಕಟ್ಟೆಯಿಂದ ಪಡೆಯುವುದು ಅನಗತ್ಯವಾಗುತ್ತದೆ. ಬ್ಯಾಂಕುಗಳು ಹಣದ ಮಾರುಕಟ್ಟೆಯಲ್ಲಿ ಗರಿಷ್ಠ ಬಡ್ಡಿಯ ಮೇಲೆ ಸಾಲ ತೆಗೆದುಕೊಳ್ಳಲು ಸಿದ್ಧವಾಗಿರುತ್ತವೆ. ಈ ಬಡ್ಡಿಯ ಗರಿಷ್ಠಮಟ್ಟ ಸೇಕಡ 15. ಚೆಕ್ಕುಗಳ ವಿಲೇವಾರಿ ತಡವಾಗುವ ಗ್ರಾಹಕರಿಗೆ ನ್ಯಾಯವಾಗಿ ಸಲ್ಲಬೇಕಾದ ಹಣ ಇದು.

ಭಾರತೀಯ ಬ್ಯಾಂಕುಗಳ ಸಂಸ್ಥೆಯವರು ಪ್ರಮುಖ ನಗರಗಳ ನಡುವೆ ಚೆಕ್ಕುಗಳ ರವಾನೆಗೆ ಕ್ರಮ ಕೈಗೊಂಡಿದ್ದಾರಾದರೂ, ಚೆಕ್ಕುಗಳಿಂದ ವರ್ಷವೊಂದರಲ್ಲಿ ನಡೆಯುವ ವ್ಯವಹಾರಗಳಲ್ಲಿ ಸುಮಾರು ರೂ. 50,000 ಕೋಟಿಗಿಂತ ಹೆಚ್ಚಾದ ಮೊತ್ತವನ್ನು ನೋಡಿದಾಗ ಈ ಕ್ರಮಗಳು ಎಷ್ಟೂ ಸಾಲದು ಎಂಬುದು ತಿಳಿಯುತ್ತದೆ.

ಇತ್ತೀಚೆಗೆ ಠೇವಣಿದಾರರು ಬ್ಯಾಂಕುಗಳಿಂದ ಎದುರಿಸುತ್ತಿರುವ ಮತ್ತೊಂದು ಮುಖ್ಯ ಸಮಸ್ಯೆಯೆಂದರೆ, ಭದ್ರತಾ ಠೇವಣಿಯಲ್ಲಿ ತೊಡಗಿಸಿರುವ ಹಣವನ್ನು ಠೇವಣಿದಾರನ ಹಕ್ಕುದಾರರು ಪಡೆಯುವಲ್ಲಿ ಆಗುತ್ತಿರುವ ವಿಳಂಬ.

ಕೆಲವು ವೇಳೆ ಜಂಟಿ ಖಾತೆಯಲ್ಲಿರುವ ಹಣವನ್ನು ಕೂಡ ಪಾವತಿ ಮಾಡಲು ನಿರಾಕರಿಸಲಾಗುತ್ತದೆ. ಇಲ್ಲಿ ಕೂಡ ಸಾರ್ವಜನಿಕ ಹಣವನ್ನು ಬ್ಯಾಂಕುಗಳು ದುರುಪಯೋಗಪಡಿಸಿಕೊಳ್ಳುತ್ತಿವೆ.

ಠೇವಣಿದಾರ ಮೃತಿ ಹೊಂದಿದಾಗ ಆತನ ಖಾತೆಯಲ್ಲಿನ ಹಣವನ್ನು ಹಕ್ಕುದಾರರಿಗೆ ಸಲ್ಲಿಸುವಾಗ ಆಗುವ ವಿಳಂಬ ಕೂಡ ಆತಂಕಕಾರಿಯಾದ್ದು. ಬ್ಯಾಂಕುಗಳು ಸಾಮಾನ್ಯವಾಗಿ ನ್ಯಾಯಾಲಯಗಳು ನೀಡುವ ಉತ್ತರಾಧಿಕಾರ ಹಾಗೂ ಅನುಮತಿ ಪತ್ರಗಳನ್ನು ಇಂಥ ಸಂದರ್ಭಗಳಲ್ಲಿ ಕೇಳುತ್ತವೆ. ಸಣ್ಣ ಠೇವಣಿದಾರಿಗೆ ಇದರಿಂದ ಕಿರುಕುಳವಾಗುತ್ತದೆ. ಅನೇಕ ವೇಳೆ ಇದೊಂದು ವಿಪರ್ಯಾಸ. ಏಕೆಂದರೆ ಕೆಲವೊಮ್ಮೆ ಉತ್ತರಾಧಿಕಾರ ಪತ್ರವನ್ನು ಪಡೆಯಲು ತಗಲುವ ಖರ್ಚು ಬ್ಯಾಂಕಿನಲ್ಲಿರುವ ಹಣಕ್ಕಿಂತ ಹೆಚ್ಚಾಗುತ್ತದೆ. ಅಲ್ಲದೆ ಅನೇಕ ಠೇವಣಿದಾರರಿಗೆ ಉತ್ತರಾಧಿಕಾರ ಪತ್ರವನ್ನು ಪಡೆಯಲು ಸಾಕಷ್ಟು ಶಿಕ್ಷಣ ಹಾಗೂ ಸಾಂಸ್ಥಿಕ ನೆರವುಗಳಿಲ್ಲದೆ ಬಹಳ ಕಷ್ಟವಾಗುತ್ತದೆ. ಹೀಗೆ ತೊಂದರೆಗೀಡಾಗುವವರು ಯಾವಾಗಲೂ ಸಣ್ಣ ಮಂದಿ. ಇದಕ್ಕೆ ಬೇಕಾದಷ್ಟು ನಿದರ್ಶನಗಳನ್ನೀಯಬಹುದು.

ರಿಸರ್ವ್ ಬ್ಯಾಂಕ್ ಪ್ರಕಟಿಸಿರುವ "ಭಾರತೀಯ ಬ್ಯಾಂಕುಗಳಿಗೆ ಸಂಬಂಧಿಸಿದ ಅಂಕಿಅಂಶ 1973" ರ ಪ್ರಕಾರ 9 ಲಕ್ಷ ಖಾತೆಗಳು ಚಾಲ್ತಿಯಲ್ಲಿಲ್ಲದೆ ಇವೆ. ಇವುಗಳ ಒಟ್ಟು ಮೊಬಲಗು ಸುಮಾರು ಹತ್ತು ಕೋಟಿ ರೂಪಾಯಿಗಳು. ಈಚಿನ ವರ್ಷಗಳಲ್ಲಿ ಮತ್ತಷ್ಟು ಹಣ ಇಂಥ ಖಾತೆಗಳಲ್ಲಿ ಸಂಗ್ರಹವಾಗಿರಬಹುದು. ಏಕೆಂದರೆ ಅನೇಕ ಠೇವಣಿದಾರರ ಹಣ ಅವರ ಹಕ್ಕುದಾರರಿಗೆ ಸಲ್ಲದೆ ಬ್ಯಾಂಕುಗಳಲ್ಲಿವೆ.

ಈ ಬಗ್ಗೆ ಠೇವಣಿದಾರರ ಸಂಸ್ಥೆ ಭವಿಷ್ಯನಿಧಿಯಲ್ಲಿನಂತೆ ಬ್ಯಾಂಕ್ ಠೇವಣಿಗಳಿಗೂ ನಾಮಕರಣ ಪದ್ಧತಿಯನ್ನು ಅನುಷ್ಠಾನಕ್ಕೆ ತರಬಹುದೆಂದು ಸಲಹೆ ಮಾಡಿತ್ತು.

ಬ್ಯಾಂಕುಗಳ ನಿಯಮಗಳನ್ನು ಪುನರ್‌ಪರಿಶೀಲಿಸಿದ 'ರಾಜಮನ್ನಾರ್' ಸಮಿತಿ ಇದನ್ನು ಒಪ್ಪಿತ್ತೆಂದೂ, ಭಾರತ ಸರ್ಕಾರ ಕೂಡ ಇದರ ಬಗ್ಗೆ ಅನುಕೂಲಕರ ನಿಲುವನ್ನು ತಳೆದಿದೆಯೆಂದೂ ತಿಳಿದುಬಂದಿದೆ. ಆದರೂ ಇದನ್ನು ಅನುಷ್ಠಾನಕ್ಕೆ ತರಲು ಬ್ಯಾಂಕುಗಳು ಇನ್ನೂ ಯೋಚಿಸುತ್ತಿರುವುದು ಅತ್ಯಂತ ವಿಷಾದನೀಯ.

ಓರ್ವ ವಿಧವೆಯ ಹೇಳಿಕೆಯನ್ನು ನಾವು ಇಲ್ಲಿ ಗಮನಿಸಬಹುದು. "ಭಾರತೀಯ ಮಹಿಳೆಗೆ ತನ್ನ ಪತಿ ಅಮೂಲ್ಯವಾದ ಆಸ್ತಿ. ಪತಿಯನ್ನು ಕಳೆದುಕೊಳ್ಳುವುದು ಆಕೆಗೆ ದುರ್ಭರ ಆಘಾತ. ಆಕೆಯ ಅತ್ಯಂತ ದುಃಖಮಯ ಸಮಯದಲ್ಲಿ ಬ್ಯಾಂಕುಗಳು ಅವಳಿಗೆ ಸಹಾಯ ಮಾಡುವ ಬದಲು ಅವಳನ್ನು ತೊಂದರೆಗೀಡುಮಾಡುತ್ತವೆ."

ವರ್ಗಾವಣೆಯಲ್ಲಿ ಚೆಕ್ಕುಗಳು ಕಳೆದು ಹೋಗುವುದುಂಟು. ಇದರಿಂದಲೂ ಗ್ರಾಹಕರಿಗೆ ತಲೆನೋವುಂಟಾಗುತ್ತದೆ. ಸಾಮಾನ್ಯವಾಗಿ ಪ್ರಾಮಾಣಿಕ ಸೇವೆ ಸಲ್ಲಿಸುವ ಅಂಚೆ ಇಲಾಖೆಯೊಳಗೆ ಕೆಲವು ದುಷ್ಟ ವ್ಯಕ್ತಿಗಳು ತೂರಿಕೊಂಡು ಚೆಕ್ ಹಾಗೂ ಡ್ರಾಫ್ಟ್‌ಗಳು ಇರಬಹುದಾದ ಲಕೋಟೆಗಳನ್ನು ಅಪಹರಿಸಿ ಹೊರಗಿನ ಕೆಲವು ಧೂರ್ತರಿಗೆ ಕೆಲವು 2 ಅಥವಾ 3 ರೂ.ಗಳಿಗೊಂದರಂತೆ ಮಾರಿಬಿಡುತ್ತಾರೆ. ಸಾಮಾನ್ಯವಾಗಿ ದೂರವಾಣಿ ಇಲಾಖೆ, ವಿದ್ಯುಚ್ಛಕ್ತಿ ಇಲಾಖೆ, ಅಥವಾ ಜೀವವಿಮಾ ಕಾರ್ಪೊರೇಷನ್‌ಗಳ ವಿಳಾಸಗಳುಳ್ಳ ಲಕೋಟೆಗಳಲ್ಲಿ ಚೆಕ್ಕುಗಳಿರುವುದುಂಟು. ಈ ಚೆಕ್ಕುಗಳನ್ನು ಒಂದು ಸಾವಿರ ರೂಪಾಯಿಗಳ ಕೆಳಗಿನ ಚೆಕ್ಕುಗಳನ್ನಾಗಿ ಪರಿವರ್ತಿಸಿ ದುರ್ಜನರು ಲಾಭ ಪಡೆಯುತ್ತಾರೆ. ಬ್ಯಾಂಕುಗಳು ತಮ್ಮ ಕಾರ್ಯಬಾಹುಳ್ಯದಿಂದಾಗಿ ಒಂದು ಸಾವಿರ ರೂ.ಗಳಿಗಿಂತ ಕೆಳಗಿನ ಮೌಲ್ಯದ ಚೆಕ್ಕುಗಳನ್ನು ನೀಲಲೋಹಿತಾತೀತ ಕಿರಣ ಯಂತ್ರದಿಂದ ಪರೀಕ್ಷಿಸುವುದಿಲ್ಲವೆಂಬ ಸಂಗತಿ ಅನುಕೂಲಕರವಾಗಿ ಪರಿಣಮಿಸಿದೆ. ಬ್ಯಾಂಕುಗಳಿಗೆ ಒಪ್ಪಿಸಲಾಗುವ ಇಂಥ ಚೆಕ್ಕುಗಳು ಆದರಿಸಲ್ಪಡುತ್ತವೆ. ನತದೃಷ್ಟ ಠೇವಣಿದಾರರು ತಮ್ಮ ಖಾತೆಯಲ್ಲಿ ಈ ವ್ಯವಹಾರದ ದಾಖಲೆಯನ್ನು ನೋಡಿ ಚಕಿತರಾಗಿ ಚೆಕ್ಕುಗಳ ಪರೀಕ್ಷೆಯ ಅನಂತರ ನೈಜ ಸಂಗತಿಯನ್ನು ತಿಳಿಯುತ್ತಾರೆ. ಸಾಮಾನ್ಯವಾಗಿ ಬ್ಯಾಂಕುಗಳು ಇಂಥ ಸಮಯದಲ್ಲಿ ಠೇವಣಿದಾರರಿಗೆ ಅವರ ಹಣವನ್ನು ನೀಡಬೇಕಾಗುತ್ತದೆ. ಏಕೆಂದರೆ ಚೆಕ್‌ಗಳನ್ನು ಸೂಕ್ತ ಪರೀಕ್ಷೆಗೆ ಗುರಿಪಡಿಸಿ ಹಣ ಪಾವತಿಮಾಡುವುದು ಬ್ಯಾಂಕುಗಳ ಕರ್ತವ್ಯವಾಗಿರುತ್ತದೆ. ಹೀಗಿದ್ದರೂ ಇತ್ತೀಚಿನ ವರ್ಷಗಳಲ್ಲಿ ಬ್ಯಾಂಕುಗಳು ತಮ್ಮ ದೈನಂದಿನ ವ್ಯವಹಾರದಲ್ಲಿ ಎಂದಿನಂತೆ ಈ ಚೆಕ್ಕನ್ನು ಸಾಕಷ್ಟು ಗಮನಿಸಿಯೇ ಆದರಿಸಿದ್ದೇವೆ ಎಂಬ ವಾದವನ್ನು ಮುನ್ನೊಡ್ಡಿ ಠೇವಣಿದಾರರಿಗೆ ಹಣ ಪಾವತಿ ಮಾಡಲು ನಿರಾಕರಿಸುತ್ತವೆ. ಇದಕ್ಕೆ ಕಾರಣ ಕೂಡ ಕುತೂಹಲಕಾರಿಯಾಗಿದೆ. ಈ ಮುನ್ನ ಇಂಥ ಸಂದರ್ಭಗಳಲ್ಲಿ ಅವರಿಗೆ ವಿಮಾ ಕಂಪನಿಯಿಂದ ಹಣ ಪಾವತಿಯಾಗುತ್ತಿತ್ತು. ಈಗ ವಿಮಾ ಕಂಪೆನಿಯವರು ರೂ. 20,000ಗಿಂತ ಮೇಲ್ಪಟ್ಟ ವ್ಯವಹಾರಗಳನ್ನು ಮಾತ್ರ ಗಣನೆಗೆ ತಂದುಕೊಳ್ಳುತ್ತಾರೆ, ಎಂದರೆ ರೂ. 20,000ಕ್ಕಿಂತ ಹೆಚ್ಚಿನ ಮೊಬಲಗಿನ ದುರ್ವ್ಯವಹಾರಕ್ಕೆ ಮಾತ್ರ ವಿಮಾ ಕಂಪನಿ ಪರಿಹಾರ ನೀಡುತ್ತದೆ. ಅಂತರರಾಷ್ಟ್ರೀಯ ವಿಮಾ ಕಂಪೆನಿಗಳು ಭಾರತೀಯ ಬ್ಯಾಂಕ್‌ಗಳಲ್ಲಿ ನಡೆಯುವ ದುರ್ವ್ಯವಹಾರಗಳ ಸಂಖ್ಯೆಯನ್ನು ಗಮನಿಸಿ ವಿಮೆಯನ್ನು ನೀಡಲು ನಿರಾಕರಿಸಿವೆ. ಪ್ರೀಮಿಯಂ ದರವನ್ನು ಅಧಿಕವಾಗಿ ಏರಿಸುವುದರ ಮೂಲಕ ಅವು ಈ ನಿರಾಕರಣೆಯನ್ನು ಆಚರಣೆಯಲ್ಲಿ ತಂದಿವೆ. ಇದೆಲ್ಲದರ ಫಲವೆಂದರೆ, ಹೆಚ್ಚು ಠೇವಣಿಯಿಟ್ಟಾತನಿಗೆ ಯಾವ ತೊಂದರೆಯೂ ಆಗದೆ, ಹೆಚ್ಚು ಸಂಖ್ಯೆಯ ಸಣ್ಣ ಠೇವಣಿದಾರರಿಗೆ ಅತ್ಯಧಿಕ ತೊಂದರೆಯಾಗಿ ಅಪರಾಧಿಗಳಿಗೆ ಲಾಭವಾಗುತ್ತಿದೆ.

ಬ್ಯಾಂಕುಗಳು ಇದರ ನಿವಾರಣೋಪಾಯವನ್ನು ನಿರ್ಲಕ್ಷಿಸುತ್ತಿವೆ. ಭಾರತದ ಬ್ಯಾಂಕುಗಳ ಸಂಘದವರು ರೂಪಿಸಿರುವ ಸುಮಾರು ರೂ. 3ರ ಚೆಕ್ ರಕ್ಷಣಾ ಸಾಧನವೊಂದನ್ನು ತನ್ನ ಠೇವಣಿದಾರರಿಗೆ ಉಚಿತವಾಗಿ ಇಲ್ಲವೇ ಅದೇ ದರಕ್ಕೆ ನೀಡಿ ಎಂಬ ಠೇವಣಿದಾರರ ಸಂಸ್ಥೆಯ ಸಲಹೆಯನ್ನು ಬ್ಯಾಂಕುಗಳು ಉತ್ಸಾಹದಿಂದ ಸ್ವಾಗತಿಸಿಲ್ಲ ಎನ್ನುವುದು ವಿಷಾದದ ಸಂಗತಿಯಾಗಿದೆ.

ಪ್ರಮುಖವಾದ ದೂರುಗಳ ಪೈಕಿ ಮತ್ತೊಂದೆಂದರೆ ತಾವು ನೀಡುವ ವಿವಿಧ ರೀತಿಯ ಸೇವೆಗಳಿಗಾಗಿ ಬ್ಯಾಂಕುಗಳು ತೆಗೆದುಕೊಳ್ಳುವ ಹಣ. 1975ರಲ್ಲಿ ಎಲ್ಲ ರೀತಿಯ ದರಗಳನ್ನೂ ಬ್ಯಾಂಕುಗಳು ಸೇ. 100ರಷ್ಟು ಹೆಚ್ಚಿಸಿದುವು. ಹಾಗೆಯೇ ಡ್ರಾಫ್ಟ್‌ಗಳಿಗೆ ಬ್ಯಾಂಕುಗಳು ವಿಧಿಸುವ ದರ ಯಾದೃಚ್ಛಿಕವಾಗಿದೆ. ಸೇವೆಗಳಿಗೆ ಬ್ಯಾಂಕುಗಳು ದರಗಳನ್ನು ಗೊತ್ತುಮಾಡಿ ವಸೂಲ್ಮಾಡುತ್ತವಾದರೂ ಅವು ಸರಿಯಾದ ರೀತಿಯಲ್ಲಿ ಸೇವೆ ಸಲ್ಲಿಸುವುದಿಲ್ಲವೆಂಬುದು ಬೇರೆಯೇ ವಿಚಾರ.

**ಇಂಥ ಪರಿಸ್ಥಿತಿಗೆ ಕಾರಣಗಳು**

ಬ್ಯಾಂಕುಗಳು ವಿಮರ್ಶಾತ್ಮಕ ಟೀಕೆಗಳನ್ನು ಮೆಚ್ಚುವ ಪರಿಪಾಟವನ್ನಿಟ್ಟುಕೊಂಡಿಲ್ಲ. ಬ್ಯಾಂಕುಗಳ ಮೇಲೆ ದೂರುಗಳಿದ್ದರೂ ಋಣಿಗಳು ಏನೂ ಮಾಡಲಾಗದೆ ವಿನಯಶೀಲರಾಗಿರುತ್ತಾರೆ. ಹೀಗಿರುವಾಗ ಬ್ಯಾಂಕುಗಳು ಠೇವಣಿದಾರರುಗಳ ದೂರುಗಳನ್ನು ಸಹಿಸದೆ ಇರುವುದು ಸಹಜವಾಗಿದೆ. ಆದರೆ ಬ್ಯಾಂಕುಗಳು ಇಂಥ ಟೀಕೆಗಳನ್ನು ಸರಿಯಾದ ರೀತಿಯಲ್ಲಿ ತೆಗೆದುಕೊಂಡು ಪರಿಹಾರಗಳನ್ನು ಕೈಗೊಳ್ಳುವ ಸಮಯ ಬಂದಿದೆ. ಬ್ಯಾಂಕುಗಳಲ್ಲಿ ಆಧುನಿಕ ರೀತಿಯ ಆಡಳಿತ ವ್ಯವಸ್ಥೆ ಇಲ್ಲದಿರುವುದು ಇಂಥ ಸ್ಥಿತಿಗೆ ಮೊತ್ತ ಮೊದಲ ಕಾರಣ.

ಎರಡನೆಯದಾಗಿ, ಕಾರ್ಮಿಕ ಸಂಘಗಳು ಬ್ಯಾಂಕಿಂಗ್ ಉದ್ಯಮದಲ್ಲಿ ಅತ್ಯಂತ ಪ್ರಬಲವಾಗಿರುವುದು. ಕೆಲವೊಮ್ಮೆ ಇವುಗಳಿಂದ ಬ್ಯಾಂಕ್ ಹಾಗೂ ಗ್ರಾಹಕರ ಸಂಬಂಧಗಳು, ವಿಷಮವಾಗುತ್ತವೆ. ಗ್ರಾಹಕರ ಸೇವೆ ತಮ್ಮ ಗುರಿಗಳಲ್ಲೊಂದು ಎಂದು ಸಂಘಗಳು ಸಾರಿದರೂ ಅದು ಸಾಧಿತವಾಗುವವರೆಗೆ ಗ್ರಾಹಕರಿಗೆ ಈ ಹೇಳಿಕೆಯ ಬಗ್ಗೆ ವಿಶ್ವಾಸ ಮೂಡುವುದಿಲ್ಲ. ಮೂರನೆಯದಾಗಿ, ಅತ್ಯಂತ ಹಳೆಯ ವ್ಯವಸ್ಥೆಯನ್ನೇ ಬ್ಯಾಂಕುಗಳು ಅನುಸರಿಸುತ್ತಿವೆ. ಬದಲಾಗುತ್ತಿರುವ ಅರ್ಥ ವ್ಯವಸ್ಥೆಯನ್ನು ಬ್ಯಾಂಕುಗಳು ಗಮನಕ್ಕೆ ತಂದುಕೊಳ್ಳುತ್ತಿಲ್ಲ. ನಾಲ್ಕನೆಯದಾಗಿ, ಬ್ಯಾಂಕುಗಳ ಸೇವೆಗಳಿಗೆ ವಿಶೇಷವಾದ ಬೇಡಿಕೆ ಇರುವುದರಿಂದ ಬ್ಯಾಂಕುಗಳ ಕೈ ಯಾವಾಗಲೂ ಮೇಲಾಗಿರುತ್ತದೆ. ಎಂದರೆ ಬಿಕರಿದಾರ ಪ್ರಾಬಲ್ಯ ಮಾರುಕಟ್ಟೆ ಸ್ಥಿತಿಯಲ್ಲೇ ಅವು ವ್ಯವಹರಿಸುವುದರಿಂದ ನಿಜವಾದ ಲಾಭಗಳಿಕೆ ಬ್ಯಾಂಕ್ ವ್ಯವಹಾರಗಳ ಮೇಲೆ ಒಂದು ಹಿಡಿತವಾಗಿ ಕೆಲಸ ಮಾಡುತ್ತಿಲ್ಲ.

ಐದನೆಯದಾಗಿ, ಭಾರತವಲ್ಲಿ ಗ್ರಾಹಕರ ಚಳುವಳಿ ಇಲ್ಲದಿರುವುದು. ಗ್ರಾಹಕರು ಸಂಘಟಿತರಾಗಿ ತಮ್ಮ ಹಿತಾಸಕ್ತಿಗಳಿಗಾಗಿ ಎಲ್ಲಿಯವರೆಗೆ ಹೋರಾಟ ನಡೆಸುವುದಿಲ್ಲವೋ ಅಲ್ಲಿಯವರೆಗೂ ಅವರಿಗೆ ಯಾರೂ ಸಹಾಯ ಮಾಡುವುದಿಲ್ಲ. ಇದು ಬ್ಯಾಂಕುಗಳಿಗೆ ಅನುಕೂಲವಾಗುತ್ತದೆ.

**ಪರಿಹಾರಗಳು**

ಮೇಲೆ ಹೇಳಿದ ಗಂಭೀರ ಪರಿಸ್ಥಿತಿಗೆ ಕಾರಣವಾದ ಸಮಸ್ಯೆಗಳಿಗೆ ಉತ್ತರ ಹುಡುಕಿ ಅವನ್ನು ಆಚರಣೆಗೆ ತರುವುದರಿಂದ ಪರಿಸ್ಥಿತಿಯನ್ನು ಸುಧಾರಿಸಬಹುದು. ಭಾರತೀಯ ರಿಸರ್ವ್ ಬ್ಯಾಂಕು ಹಾಗೂ ಭಾರತೀಯ ಬ್ಯಾಂಕುಗಳ ಸಂಸ್ಥೆಯವರು ಬ್ಯಾಂಕುಗಳ ಆಡಳಿತ ಹಾಗೂ ಸಿಬ್ಬಂದಿ ವರ್ಗಗಳಲ್ಲಿ 'ಗ್ರಾಹಕರಿಂದ ತಮ್ಮ ಬದುಕು' ಎಂಬ ಸತ್ಯದ ಅರಿವು ಮೂಡುವಂತೆ ಮಾಡಬೇಕು. ಇಂಥ ಮೂಲಭೂತವಾದ ಅರಿವು ಎಲ್ಲರಲ್ಲಿ ಮೂಡುವವರೆಗೆ ಪರಿಸ್ಥಿತಿ ಸುಧಾರಿಸದು.

ಎರಡನೆಯದಾಗಿ, ಆಧುನಿಕ ವ್ಯವಸ್ಥೆಗಳನ್ನು ಬ್ಯಾಂಕುಗಳು ಅಳವಡಿಸಿಕೊಳ್ಳಬೇಕು. ಈ ನಿಟ್ಟಿನಲ್ಲಿ ಒಂದು ಸಲಹೆಯೆಂದರೆ, ಬ್ಯಾಂಕು ಋಣಿಗಳಿಗೆ ಹೇರುವ ಗರಿಷ್ಠ ಬಡ್ಡಿದರಕ್ಕೂ ಒಂದು ವರ್ಷದ ಠೇವಣಿಗೆ ಅದು ನೀಡುವ ಬಡ್ಡಿ ದರಕ್ಕೂ ಶೇ. 4ಕ್ಕಿಂತ ಹೆಚ್ಚಿಗೆ ವ್ಯತ್ಯಾಸವಿರದಂತೆ ಒಂದು ನಿಯಮವನ್ನು ಜಾರಿಗೆ ತರುವುದು. ಇದರಿಂದ ಬ್ಯಾಂಕುಗಳ ಆಡಳಿತ ಸುವ್ಯವಸ್ಥಿತಗೊಳ್ಳುವುದು ಅನಿವಾರ್ಯವಾಗುವುದೇ ಅಲ್ಲದೆ ಒಳ್ಳೆಯ ಸೇವೆ ನೀಡುವ ಒತ್ತಾಯಕ್ಕೆ ಅವು ಒಳಗಾಗುತ್ತವೆ. ಮೂರನೆಯದಾಗಿ, ಕಾರ್ಮಿಕ ಸಂಘಗಳ ಚಟುವಟಿಕೆಯ ಕಾರಣದಿಂದಾಗಿ ಬ್ಯಾಂಕ್ ಕಾರ್ಮಿಕರನ್ನು ಬಿಡುಗಡೆ ಮಾಡುವುದನ್ನು ನಿಲ್ಲಿಸುವುದು. ಒಂದು ವೇಳೆ ಕಾರ್ಮಿಕ ನಾಯಕರು ಅನಿವಾರ್ಯವಾಗಿ ಬ್ಯಾಂಕಿನಿಂದ ಹೊರಗೆ ಹೋಗಬೇಕಾದಲ್ಲಿ ಹಾಗೆ ಹೋದ ಸಮಯದ ಸಂಬಳವನ್ನು ಕಾರ್ಮಿಕ ಸಂಘ ಭರಿಸಬೇಕೆಂದು ನಿಯಮವನ್ನು ಜಾರಿ ಮಾಡಬೇಕು. ಕಾರ್ಮಿಕರ ಕೆಲಸಕ್ಕೆ ಸಾರ್ವಜನಿಕರ ಹಣದ ವ್ಯಯವಾಗಬಾರದು. ನಾಲ್ಕನೆಯದಾಗಿ, ಬ್ಯಾಂಕುಗಳನ್ನು ವೃತ್ತಿನಿರತ ಬ್ಯಾಂಕರುಗಳ ಮೇಲ್ವಿಚಾರಣೆಗೆ ಒಳಪಡಿಸಬೇಕು. ಕೊನೆಗೆ ನೇರವಾಗಿ ಅವರೇ ಬ್ಯಾಂಕುಗಳನ್ನು ನಡೆಸುವಂತಾಗಬೇಕು.

ಗ್ರಾಹಕರ ಹಾಗೂ ಅವರ ಕೋರಿಕೆಗಳ ಈಡೇರಿಕೆಯನ್ನು ಗಮನದಲ್ಲಿಟ್ಟುಕೊಂಡರೆ ಮತ್ತು ಸೂಕ್ತ ಆಧುನಿಕ ವ್ಯವಸ್ಥೆಗಳನ್ನು ಅಳವಡಿಸಿಕೊಂಡರೆ ಭಾರತೀಯ ಬ್ಯಾಂಕುಗಳಿಗೆ ಒಳ್ಳೆಯ ಭವಿಷ್ಯವಿದೆಯೆಂದು ನಿರೀಕ್ಷಿಸಬಹುದು. ಎಷ್ಟು ಬೇಗ ಈ ಬೇಡಿಕೆಗಳು ಈಡೇರುತ್ತವೆಯೋ ಅಷ್ಟು ಬೇಗ ಗ್ರಾಹಕರಿಗೆ, ಬ್ಯಾಂಕಿಂಗ್ ಉದ್ಯಮಕ್ಕೆ ಹಾಗೂ ದೇಶಕ್ಕೆ ಒಳಿತಾಗುತ್ತದೆ.

---

**1980 ರ ಮಾರ್ಚಿಯಲ್ಲಿ ಉತ್ತರ ಪ್ರದೇಶದಲ್ಲಿ ವಾಣಿಜ್ಯ ಬ್ಯಾಂಕುಗಳ (ಅನುಸೂಚಿತ) 3659 ಶಾಖೆಗಳಿದ್ದು, ಅದು ಇತರ ರಾಜ್ಯಗಳಿಗಿಂತ ಮುಂದಿದೆ. ರಿಸರ್ವ್ ಬ್ಯಾಂಕಿನ ಅಂಕಿ ಅಂಶಗಳ ಪ್ರಕಾರ ಜೂನ್ 1979 ರಿಂದ ಮಾರ್ಚಿ 1980ರವರಗಿನ ಅವಧಿಯಲ್ಲಿ 289 ಶಾಖೆಗಳನ್ನು ಆ ರಾಜ್ಯದಲ್ಲಿ ತೆರೆಯಲಾಗಿದ್ದು, ಶಾಖಾ ವಿಸ್ತರಣೆಯಲ್ಲಿಯೂ ಅದು ಇತರ ರಾಜ್ಯಗಳಿಗಿಂತ ಮುಂದಿದೆ.**

---

# ಅನಾವೃಷ್ಟಿಪೀಡಿತ ಪ್ರದೇಶದ ಸುಧಾರಣೆಯಲ್ಲಿ ಬ್ಯಾಂಕುಗಳ ಮತ್ತು ಸಹಕಾರಿ ಸಂಘಗಳ ಪಾತ್ರ

ಡಾ|| ಕೆ. ಪುಟ್ಟಸ್ವಾಮಯ್ಯ

ಅನಾವೃಷ್ಟಿ ಪೀಡಿತ ಪ್ರದೇಶದ ಸ್ಥಿತಿಗತಿಗಳನ್ನು ಸುಧಾರಿಸುವ ವಿಷಯ ಕೆಲಕಾಲದಿಂದಲೂ ರಾಜ್ಯ ಮತ್ತು ಕೇಂದ್ರ ಸರಕಾರಗಳ ಗಮನವನ್ನು ಸೆಳೆದಿದೆ. ಸಮಸ್ಯೆ ಬೃಹತ್ ಸ್ವರೂಪದ್ದಾಗಿದ್ದು ಇದಕ್ಕಾಗಿ ಸುದೀರ್ಘವಾದ ಯೋಜನಾ ಬದ್ಧ ಕಾರ್ಯಕ್ರಮ ಅಗತ್ಯ. ನಾಲ್ಕನೆಯ ಯೋಜನೆಯಲ್ಲಿ "ಸಾಮಾಜಿಕ ನ್ಯಾಯ ಸಾಧನೆಯೊಂದಿಗೆ" ಈ ನಿಟ್ಟಿನಲ್ಲಿ ಗುರಿ ಸಾಧಿಸಲು ಕೆಲವೊಂದು ಕಾರ್ಯಕ್ರಮಗಳನ್ನು ಪ್ರಾರಂಭಿಸಲಾಯಿತು. ಭಾರತದಲ್ಲಿ ಸುಮಾರು 72 ಜಿಲ್ಲೆಗಳು ಪೂರ್ತಿಯಾಗಿ ಅಥವಾ ಕೆಲಮಟ್ಟಿಗೆ ಬರಗಾಲ ಪೀಡಿತ ಪ್ರದೇಶಗಳೆಂದು ಗುರುತಿಸಲ್ಪಟ್ಟಿವೆ. ಭಾರತದ ಈ ಪ್ರದೇಶ ಸುಮಾರು 6 ಲಕ್ಷ ಚದರ ಮೈಲಿಗಳಷ್ಟು ವಿಸ್ತಾರವಾಗಿದೆ. ಈ ಭಾಗಗಳಲ್ಲಿ ವಾಸಿಸುವ ಜನಸಂಖ್ಯೆ 1971ರ ಜನಗಣತಿಯ ಪ್ರಕಾರ ಆರೂವರೆ ಕೋಟಿ ಕರ್ನಾಟಕದಲ್ಲಿ ನಾಲ್ಕನೆಯ ಯೋಜನೆಯಲ್ಲಿ ಕೇವಲ ಕಾಮಗಾರಿ ಯೋಜನಾ ರೂಪದಲ್ಲಿ ಕಾರ್ಯಕ್ರಮವನ್ನು ಕೈಗೊಳ್ಳಲಾಯಿತು. ಈ ಕಾರ್ಯಕ್ರಮವನ್ನು 13 ರಾಜ್ಯಗಳಿಗೆ ಸೇರಿದ 72 ಜಿಲ್ಲೆಗಳಲ್ಲಿ 54 ಯೋಜನಾ ಪ್ರದೇಶಗಳಲ್ಲಿ ಜಾರಿಗೆ ತರಲಾಯಿತು.

ಈ ಕಾರ್ಯಕ್ರಮಕ್ಕೆ ಪ್ರದೇಶವನ್ನು ಆರಿಸುವಾಗ ಆ ಪ್ರದೇಶದಲ್ಲಿ ಬೀಳುವ ಮಳೆ ಮತ್ತು ಮಳೆಗಾಲದ ಅವಧಿ' ಈ ಮೊದಲು ಬಂದ ಅನಾವೃಷ್ಟಿ ಮತ್ತು ಅವುಗಳ ತೀಕ್ಷ್ಣತೆ ಮತ್ತು ಸಾಗುವಳಿಯಾದ ಒಟ್ಟು ಪ್ರದೇಶದಲ್ಲಿ ನೀರಾವರಿ ಸೌಲಭ್ಯವಿರುವ ಪ್ರದೇಶದ ಪ್ರಮಾಣ, ಈ ಮೊದಲಾದ ಅಂಶಗಳನ್ನು ಗಮನಿಸಲಾಗಿದೆ. ನಾಲ್ಕನೆಯ ಯೋಜನೆಯಲ್ಲಿ ಈ ದಿಸೆಯಲ್ಲಿ ಕೈಗೊಂಡ ಕಾರ್ಯಕ್ರಮಗಳೆಂದರೆ ಸಣ್ಣ ನೀರಾವರಿ ಭೂಸಾರ ರಕ್ಷಣೆ, ಹುಲ್ಲುಗಾವಲುಗಳ ನಿರ್ಮಾಣ ಮತ್ತು ಅರಣ್ಯಾಭಿವೃದ್ಧಿ ಮತ್ತು ರಸ್ತೆ ನಿರ್ಮಾಣ. ರಾಜ್ಯದಲ್ಲಿ 42 ತಾಲ್ಲೂಕುಗಳಲ್ಲಿ ಈ ಕಾರ್ಯಕ್ರಮವನ್ನು ಜಾರಿಯಲ್ಲಿ ತರಲಾಯಿತು. ಅವುಗಳಿಗೆ ಆದ ವೆಚ್ಚ ರೂ. 1,017.60 ಲಕ್ಷ.

ಐದನೆಯ ಯೋಜನೆಯಲ್ಲಿ ತೋಟಗಾರಿಕೆ, ಮೀನುಗಾರಿಕೆ, ರೇಷ್ಮೆ ವ್ಯವಸಾಯ, ಪಶುಸಂಗೋಪನೆ, ಈ ಮೊದಲಾದ ಕಾರ್ಯಕ್ರಮಗಳನ್ನು ಮೊದಲಿನ ಕಾರ್ಯಗಳೊಂದಿಗೆ ತೆಗೆದುಕೊಂಡು ರಸ್ತೆ ನಿರ್ಮಾಣ ಕಾರ್ಯವನ್ನು ಕೈಬಿಡಲಾಯಿತು. ಸಣ್ಣ ಮತ್ತು ಅತಿಸಣ್ಣ ರೈತರಿಗೆ ಮತ್ತು ಕೃಷಿ ಕಾರ್ಮಿಕರಿಗೆ ಧನಸಹಾಯವನ್ನು ಒದಗಿಸುವ ಸಲುವಾಗಿ ಸಹಕಾರಿ ಸಂಘಗಳಿಗೆ ಧನಸಹಾಯವನ್ನು ಕೊಡಲಾಯಿತು. ವಿಶ್ವಬ್ಯಾಂಕಿನವರು ಬಿಜಾಪುರ ಜಿಲ್ಲೆಯಲ್ಲಿ ಈ ಕಾರ್ಯಕ್ರಮವನ್ನು ಕೈಗೊಂಡಿದ್ದಾರೆ. ಸಂಪೂರ್ಣ ಬಿಜಾಪುರ ಜಿಲ್ಲೆಯಲ್ಲಿ ಈ ಯೋಜನೆಯನ್ನು ಅಳವಡಿಸಲಾಗಿದೆ. ಅದರಿಂದಾಗಿ, ಈ ಕಾರ್ಯಕ್ರಮ 46 ತಾಲ್ಲೂಕುಗಳಲ್ಲಿ ಜಾರಿಯಲ್ಲಿದೆ. ಯೋಜನೆಯಲ್ಲಿ ಕೈಗೊಂಡ ಬಹಳಷ್ಟು ಕಾರ್ಯಕ್ರಮಗಳಿಗೆ ವಾಣಿಜ್ಯ ಬ್ಯಾಂಕು ಮತ್ತು ಸಹಕಾರಿ ಸಂಘಗಳ ಸಾಲಸೌಲಭ್ಯ ದೊರೆತಿದೆ. ಈ ಯೋಜನೆಯಲ್ಲಿ ಕೈಗೊಳ್ಳುವ ಬಹುತರ ಕಾರ್ಯಗಳು ಹಣವನ್ನೆ ಅವಲಂಬಿಸಿವೆ.

ಐದನೆಯ ಯೋಜನೆಯಲ್ಲಿ ಈ ಕಾರ್ಯಕ್ರಮಕ್ಕೆ ರೂ. 34.60 ಕೋಟಿ ಮಂಜೂರಾಗಿದ್ದು ಅದರಲ್ಲಿ ವಿಶ್ವ ಬ್ಯಾಂಕ್ ನೆರವಿನ ಬಿಜಾಪುರ ಜಿಲ್ಲೆಯ ಯೋಜನೆಗೆ ರೂ. 13.63 ಕೋಟಿ ಎಂದು ನಿಗದಿಪಡಿಸಲಾಗಿದೆ. ಈ ಮೊತ್ತದಲ್ಲಿ ರೂ. 27.33 ಕೋಟಿಯನ್ನು ಐದನೆಯ ಯೋಜನೆಯಲ್ಲಿ ವೆಚ್ಚಮಾಡಲಾಯಿತು. 1979–80ಕ್ಕೆ ನಿಗದಿಪಡಿಸಲಾದ ಮೊತ್ತ ರೂ. 866.37 ಲಕ್ಷ; ಮತ್ತು ಅದಕ್ಕಾದ ವೆಚ

ರೂ. 783.46 ಲಕ್ಷ. 1980–81ಕ್ಕೆ ರೂ. 690.00 ಲಕ್ಷವನ್ನು ಈ ಯೋಜನೆಗಾಗಿ ಕೊಡಲು ತೀರ್ಮಾನಿಸಿದೆ. ಪ್ರತಿ ತಾಲ್ಲೂಕಿಗೆ ರೂ. 15.00 ಲಕ್ಷ ದೊರಕುವುದು.

ರಾಜ್ಯ ಸರ್ಕಾರ ತನ್ನ ಹಣದಿಂದ ಈ ಕಾರ್ಯಕ್ರಮ ವನ್ನು ಇನ್ನು 22 ತಾಲ್ಲೂಕುಗಳಿಗೆ ವಿಸ್ತರಿಸಿದೆ; 1980–81ಕ್ಕೆ ಪ್ರತಿ ತಾಲ್ಲೂಕಿಗೆ ರೂ. 2.00 ಲಕ್ಷವನ್ನು ಕೊಡ ಲಾಗುವುದು.

ಈ ಯೋಜನೆಯಲ್ಲಿ ಕೈಗೊಳ್ಳುವ ಕಾರ್ಯಕ್ರಮ ಗಳನ್ನು ಜಲವಿಭಾಜಕ ಪ್ರದೇಶಗಳಲ್ಲಿ ತೆಗೆದುಕೊಳ್ಳಲಾಗು ವುದು. ಒಂದು ನಿಶ್ಚಿತ ಪ್ರಮಾಣದಲ್ಲಿ ನೀರು ದೊರೆಯು ವಂತೆ ಕೆಲವೊಂದು ಸ್ಥಿತಿಗತಿಗಳನ್ನು ನಿರ್ಮಿಸಿ ಅಥವಾ ಕಾಯ್ದುಕೊಂಡು ಭೂಮಿಯನ್ನು ಮತ್ತು ಅದಕ್ಕೆ ನೈಸರ್ಗಿಕ ವಾಗಿ ನೀರು ಪೂರೈಸುವ ಜಲಮೂಲಗಳಿಗೆ ಆಧಾರವಾದ ಜಲ ವಿಭಾಜಕ ಮಟ್ಟಗಳನ್ನು ಸುಸ್ಥಿತಿಯಲ್ಲಿಡುವುದನ್ನೇ ಜಲವಿಭಾಜಕ ಮಟ್ಟಗಳ ವ್ಯವಸ್ಥೆ ಎನ್ನಲಾಗುತ್ತದೆ.

ಯೋಜನೆ ಪ್ರಾರಂಭವಾದಾಗಿನಿಂದ ಮಾರ್ಚ್ 1980ರ ವರೆಗೆ 4.19 ಲಕ್ಷ ಹೆಕ್ಟೇರು ಪ್ರದೇಶದಲ್ಲಿ ಮಣ್ಣಿನ ಸಮೀಕ್ಷೆಯನ್ನು ಕೈಗೊಳ್ಳಲಾಗಿದೆ. 5.57 ಲಕ್ಷ ಹೆಕ್ಟೇರು ಪ್ರದೇಶದಲ್ಲಿ ಭೂಸಾರ ಸಂರಕ್ಷಣೆಯ ಕಾರ್ಯವನ್ನು ಕೈ ಗೊಳ್ಳಲಾಗಿದೆ. ಉತ್ತಮ ರೀತಿಯ ಬೇಸಾಯ ಪದ್ಧತಿಯಲ್ಲಿ 5.35 ಲಕ್ಷ ಹೆಕ್ಟೇರು ಜಮೀನನ್ನು ಕಾರ್ಯರೂಪಕ್ಕೆ ತರಲಾಗಿದೆ. ಈ ಪ್ರದೇಶದಲ್ಲಿ ನೀರಾವರಿಯ ಸೌಲಭ್ಯಗಳಿವೆ. ಅದೇ ರೀತಿ ಒಣಬೇಸಾಯ ಪದ್ಧತಿಯನ್ನು 15.44 ಲಕ್ಷ ಹೆಕ್ಟೇರು ಪ್ರದೇಶದಲ್ಲಿ ತೆಗೆದುಕೊಳ್ಳಲಾಗಿದೆ. ಇದಲ್ಲದೆ ಗೊಬ್ಬರವನ್ನು ಒದಗಿಸಲಾಗಿದೆ. ನೀರಾವರಿ ಕ್ಷೇತ್ರದಲ್ಲಿ 0.24 ಲಕ್ಷ ಹೆಕ್ಟೇರು ಭೂಮಿಯನ್ನು ನೀರಾವರಿ ಅಭಿವೃದ್ಧಿಗೆ ತರಲಾಗಿದೆ. ಅರಣ್ಯಾಭಿವೃದ್ಧಿಯನ್ನು 0.35 ಲಕ್ಷ ಹೆಕ್ಟೇರು ಪ್ರದೇಶದಲ್ಲಿಯೂ ಹುಲ್ಲು ಗಾವಲು ಪ್ರದೇಶವನ್ನು 0.02 ಲಕ್ಷ ಹೆಕ್ಟೇರು ಗಳಲ್ಲಿಯೂ ಅಭಿವೃದ್ಧಿಗೊಳಿಸಲಾಗಿದೆ. ಪಶುಸಂಗೋಪನಾ ಕ್ಷೇತ್ರದಲ್ಲಿ 0.12 ಲಕ್ಷ ಹಸುಗಳನ್ನು ವಿತರಣೆ ಮಾಡ ಲಾಗಿದೆ. ಕೃತಕ ಗರ್ಭಧಾರಣ ಕೇಂದ್ರಗಳ ಮೂಲಕ 0.40 ಲಕ್ಷ ಹಸುಗಳು ಹುಟ್ಟಿರುತ್ತವೆ. ಹಾಲು ಉತ್ಪಾದನ ಸಹಕಾರಿ ಸಂಘಗಳಲ್ಲಿ ಸಾಧಾರಣವಾಗಿ ಪ್ರತಿ ಸಂಘದಲ್ಲಿ 1,600 ಲೀಟರ್ ಹಾಲು ಉತ್ಪಾದನೆ ಇರುವುದು. ಕುರಿ ಅಭಿವೃದ್ಧಿ ಕ್ಷೇತ್ರದಲ್ಲಿ 20 ಸಹಕಾರಿ ಸಂಘಗಳನ್ನು, 77 ಕೋಳಿ ಸಾಕಾಣಿಕೆ ಕೇಂದ್ರಗಳನ್ನು ಮತ್ತು 57 ಹಂದಿ ಸಾಕಾಣಿಕೆ ಕೇಂದ್ರಗಳನ್ನು ಸ್ಥಾಪಿಸಲಾಗಿದೆ. ತೋಟಗಾರಿಕೆ ಕ್ಷೇತ್ರದಲ್ಲಿ 32.23 ಲಕ್ಷ ಹಣ್ಣಿನ ಗಿಡಗಳನ್ನು ವಿತರಣೆ ಮಾಡಲಾಗಿದೆ. 0.08 ಲಕ್ಷ ಹೆಕ್ಟೇರು ಪ್ರದೇಶದಲ್ಲಿ ತರಕಾರಿ ಬೆಳೆಯಲಾಗಿದೆ. ಮೀನುಗಾರಿಕೆ ಅಭಿವೃದ್ಧಿ ಗಾಗಿ 0.14 ಹೆಕ್ಟೇರು ಪ್ರದೇಶವನ್ನು ಅಭಿವೃದ್ಧಿ ಗೊಳಿಸಲಾಗಿದೆ. ರೇಷ್ಮೆ ವ್ಯವಸಾಯಕ್ಕಾಗಿ 0.15 ಲಕ್ಷ ಹೆಕ್ಟೇರು ಪ್ರದೇಶವನ್ನು ಅಭಿವೃದ್ಧಿಪಡಿಸಲಾಗಿದೆ.

ಈ ಯೋಜನೆಯಲ್ಲಿ ಸಹಕಾರಿ ಸಂಘಗಳ ಪಾತ್ರ ಬಹಳ ಮಹತ್ವದ್ದಾಗಿದೆ. ಸಹಕಾರಿ ಸಂಘಗಳು ಸಣ್ಣ ರೈತರಿಗೆ, ಅತಿಸಣ್ಣ ರೈತರಿಗೆ ಮತ್ತು ಕೃಷಿ ಕಾರ್ಮಿಕರಿಗೆ ಸಾಲವನ್ನು ಕೊಡಬೇಕಾಗುವುದರಿಂದ ಈ ಸಂಘಗಳಿಗೆ ಸರಕಾರ ಧನ ಸಹಾಯವನ್ನು ಒದಗಿಸುವುದು. ಬಹಳಷ್ಟು ಕಾರ್ಯಕ್ರಮ ಬಳಗ ಈ ಹಣದ ಮೇಲೆ ಅವಲಂಬಿತವಾಗಿರುವುದರಿಂದ ಈ ಸಹಕಾರಿ ಸಂಘ ಸಂಸ್ಥೆಗಳ ಪಾತ್ರ ಹಿರಿದಾಗಿದೆ. ಈ ವಿಚಾರವನ್ನು ಮುಂದೆ ಮಾಡಿ ಸಾಕಷ್ಟು ಸಹಕಾರಿ ಸಂಘಗಳ ಪುನರುಜ್ಜೀವನವಾಗಬೇಕಾಗಿದೆ. ಈ ಮೊದಲು ವಾಣಿಜ್ಯ ಬ್ಯಾಂಕುಗಳು ಅಷ್ಟೊಂದು ಮುಂದೆ ಬರುತ್ತಿರಲಿಲ್ಲ. ಆದರೆ ಇತ್ತೀಚಿನ ತ್ವರಿತವಾಗಿ ಯೋಜನೆಯು ಯಶಸ್ಸನ್ನು ಕಂಡುಕೊಂಡು ವಾಣಿಜ್ಯ ಬ್ಯಾಂಕುಗಳು ಸಹಾಯ ಸಹ ಮಾಡಲು ಮುಂದೆ ಬರುತ್ತಿವೆ. ಏಕೆಂದರೆ ಸೇಕಡ 25ರಂತೆ ಸಣ್ಣ ರೈತರಿಗೆ, ಮತ್ತು 33⅓ರಂತೆ ಅತಿಸಣ್ಣ ರೈತರಿಗೆ ಮತ್ತು ಕೃಷಿ ಕಾರ್ಮಿಕರಿಗೆ ಧನಸಹಾಯವನ್ನು ಕೊಡಲಾಗುವುದು. ಉಳಿದ ಮೊತ್ತವನ್ನು ಅವರು ಬ್ಯಾಂಕುಗಳಿಂದ ಪಡೆಯ ಬೇಕಾಗುವುದು. ಆದುದರಿಂದ ಈ ಎಲ್ಲ ಕಾರ್ಯಕ್ರಮ ಗಳಲ್ಲಿ ಸಹಕಾರಿ ಸಂಘಗಳ ಮತ್ತು ವಾಣಿಜ್ಯ ಬ್ಯಾಂಕುಗಳ ಪಾತ್ರ ಮುಖ್ಯವಾಗಿದೆ.

1980–85ರ ಯೋಜನೆಯ ಅವಧಿಯಲ್ಲಿ ಒಟ್ಟಾರೆ 3,439.00 ಲಕ್ಷ ರೂಪಾಯಿಗಳನ್ನು ವಿನಿಯೋಗಿಸಲಾಗು ವುದು. ಈ ಹಣವನ್ನು 10 ಜಿಲ್ಲೆಗಳಿಗಾಗಿ ಈ ರೀತಿ ನಿಗದಿ ಮಾಡಲಾಗಿದೆ:

| ಜಿಲ್ಲೆ | | ಮೊತ್ತ (ಲಕ್ಷ ರೂ.ಗಳಲ್ಲಿ) |
|---|---|---|
| 1 ಬೆಳಗಾಂವಿ | .. | 375.00 |
| 2 ಚಿತ್ರದುರ್ಗ | .. | 377.50 |
| 3 ಚಿಕ್ಕಮಗಳೂರು | .. | 75.00 |
| 4 ತುಮಕೂರು | .. | 300.00 |
| 5 ಧಾರವಾಡ | .. | 377.50 |
| 6 ಬಳ್ಳಾರಿ | .. | 150.00 |
| 7 ಕೋಲಾರ | .. | 586.00 |
| 8 ಗುಲ್ಬರ್ಗ | .. | 225.00 |
| 9 ರಾಯಚೂರು | .. | 148.00 |
| 10 ಬಿಜಾಪುರ | .. | 825.00 |
| ಒಟ್ಟು | .. | 3.439.00 |

ಈ ಮೊತ್ತದ ಪ್ರಕಾರ ಪ್ರತಿ ತಾಲ್ಲೂಕಿಗೆ 15.00 ಲಕ್ಷ ರೂಪಾಯಿಗಳನ್ನು ಪ್ರತಿ ವರ್ಷ ಕೊಡಲಾಗುವುದು.

ನೀರಾವರಿಗೆ 960.702 ಲಕ್ಷ ರೂಪಾಯಿಗಳನ್ನು ನಿಗದಿ ಮಾಡಿದ್ದು ಈಗಾಗಲೇ ತೆಗೆದುಕೊಂಡ ಕಾರ್ಯಕ್ರಮಗಳನ್ನು ಪೂರ್ತಿಗೊಳಿಸಲು ಮಹತ್ವ ಕೊಡಲಾಗಿದೆ. ಇವುಗಳ ಜೊತೆಗೆ ಸಾಮೂಹಿಕ ನೀರಾವರಿ ಭೂಮಿಗಳನ್ನು ತೋಡುವುದು ಮತ್ತು ಪಂಪುಸೆಟ್‌ಗಳ ವಿತರಣೆ ಕೈಗೊಳ್ಳಲಾಗುವುದು. ಭೂಜಲ ಅಭಿವೃದ್ಧಿಗಾಗಿ 89.900 ಲಕ್ಷ ರೂಪಾಯಿಗಳನ್ನು ವೆಚ್ಚ ಮಾಡಲಾಗುವುದು. ಭೂಸಾರ ರಕ್ಷಣೆ ಮತ್ತು ಒಣ ಬೇಸಾಯ ಈ ಕಾರ್ಯಕ್ರಮಗಳಿಗಾಗಿ 418.718 ಲಕ್ಷ ರೂಪಾಯಿಗಳನ್ನು ನಿಗದಿಪಡಿಸಲಾಗಿದೆ. ಅರಣ್ಯಾಭಿವೃದ್ಧಿಯ ಮೊತ್ತ 510.187 ಲಕ್ಷ ರೂಪಾಯಿಗಳು. ತೋಟಗಾರಿಕೆಯ ಕಾರ್ಯಕ್ರಮದಲ್ಲಿ ಹಣ್ಣಿನ ಗಿಡಗಳ ವಿತರಣೆ, ತೋಟಗಾರಿಕೆಯ ಫಾರ್ಮ್ ಅಭಿವೃದ್ಧಿ ಈ ಮೊದಲಾದ ಕಾರ್ಯಕ್ರಮಗಳನ್ನು ತೆಗೆದುಕೊಳ್ಳಲಾಗಿದ್ದು 187.343 ಲಕ್ಷ ರೂಪಾಯಿಗಳನ್ನು ವೆಚ್ಚ ಮಾಡಲಾಗುವುದು. ಮೀನುಗಾರಿಕೆಯ ಅಭಿವೃದ್ಧಿಗೆ 152.768 ಲಕ್ಷ ರೂಪಾಯಿಗಳನ್ನು ನಿಗದಿಪಡಿಸಲಾಗಿದೆ. ಪಶುಸಂಗೋಪನ ಕ್ಷೇತ್ರದಲ್ಲಿ ಹಸುಗಳ ವಿತರಣೆ, ಕೃತಕ ಗರ್ಭಧಾರಣ ಕೇಂದ್ರಗಳ ಸ್ಥಾಪನೆ, ಕುರಿ ಕೋಳಿ ಮತ್ತು ಹಂದಿ ಅಭಿವೃದ್ಧಿ ಕಾರ್ಯವನ್ನು ತೆಗೆದುಕೊಳ್ಳಲು ಯೋಜಿಸಿದ್ದು 574.153 ಲಕ್ಷ ರೂಪಾಯಿಗಳನ್ನು ವೆಚ್ಚಮಾಡಲಾಗುವುದು. ರೇಷ್ಮೆ ವ್ಯವಸಾಯವನ್ನು ಕೈಗೊಂಡು ಅದಕ್ಕೆ ಬೇಕಾಗುವ ಸಲಕರಣೆಗಳನ್ನು ಒದಗಿಸಲಾಗುವುದು; ಮತ್ತು ಇದಕ್ಕೆ 344.104ಲಕ್ಷ ರೂಪಾಯಿಗಳು ಬೇಕಾಗುವುದೆಂದು ಯೋಜಿಸಲಾಗಿದೆ. ಜೇನು ಸಾಕಾಣಿಕೆಯನ್ನು ಚಿಕ್ಕಮಗಳೂರು, ತುಮಕೂರು, ಮತ್ತು ಕೋಲಾರ ಜಿಲ್ಲೆಗಳಲ್ಲಿ ತೆಗೆದುಕೊಳ್ಳಲಾಗುವುದು; ಮತ್ತು ಇದಕ್ಕೆ ತಗಲುವ ವೆಚ್ಚ 22.230 ಲಕ್ಷ ರೂಪಾಯಿಗಳು. ಸಹಕಾರಿ ಸಂಘಗಳಿಗೆ ಸಹಾಯ ಧನವನ್ನು ಒದಗಿಸಲು 312.730 ಲಕ್ಷ ರೂಪಾಯಿಗಳನ್ನು ನಿಗದಿಪಡಿಸಿದ್ದು ಈ ಹಣವನ್ನು ಪ್ರಾಥಮಿಕ ಸಹಕಾರಿ ಬ್ಯಾಂಕು ಮತ್ತು ಜಿಲ್ಲಾ ಸಹಕಾರಿ ಬ್ಯಾಂಕುಗಳಿಗೆ ಕೊಡಲಾಗುವುದು. ಈ ಹಣವನ್ನು ಈ ಸಂಸ್ಥೆಗಳಿಗೆ ಕೊಡುವ ಮುಖ್ಯ ಉದ್ದೇಶವೆಂದರೆ ಇವು ಸಾಲವನ್ನು ಒದಗಿಸಲು ಮುಂದೆ ಬರುವುದಕ್ಕಾಗಿ. ಬೇರೆ ಕಾರ್ಯಕ್ರಮಗಳಿಗೆಂದು ಚಿತ್ರದುರ್ಗ ಜಿಲ್ಲೆಯಲ್ಲಿ 0.25 ಲಕ್ಷ ರೂಪಾಯಿಯನ್ನು ಕಾಯ್ದಿರಿಸಲಾಗಿದೆ. ಇವೆಲ್ಲವುಗಳ ಒಟ್ಟಾರೆ ಮೊತ್ತ 3,674.791 ಲಕ್ಷ ರೂಪಾಯಿಗಳಾಗಿದ್ದು, ಯೋಜನೆಯನ್ನು, 3,439.000 ಲಕ್ಷ ರೂಪಾಯಿಗಳಿಗೆ ನಿರ್ಮಿಸಲಾಗಿದೆ.

ಯೋಜನೆಗಳನ್ನು ನಿರ್ಮಿಸುವ ಸಲುವಾಗಿ, ಅವನ್ನು ಜಾರಿಯಲ್ಲಿ ತರಲು ಉಸ್ತುವಾರಿ ವಹಿಸುವ ಬಗ್ಗೆ ಮತ್ತು ಅದರಿಂದ ದೊರೆತ ಪ್ರಯೋಜನಗಳನ್ನು ಮೌಲ್ಯಮಾಪನ ಮಾಡುವ ಸಲುವಾಗಿ ಒಂದು ನಿರ್ದೇಶನಾಲಯವನ್ನು ತೆರೆಯಲಾಗಿದೆ. ಇಲ್ಲಿಯವರೆಗೆ ಈ ಯೋಜನೆಗಳನ್ನು ಆರು ಪ್ರಾಧಿಕಾರಗಳಲ್ಲಿ ವಿಂಗಡಿಸಿದ್ದು ಆ ಪ್ರಕಾರ ರಚಿಸಲಾಗಿತ್ತು. 1978–79ರಲ್ಲಿ ಜಿಲ್ಲಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆಗಳನ್ನು ಸ್ಥಾಪಿಸಲಾಯಿತು ಮತ್ತು ಇದರಿಂದಾಗಿ ಪ್ರತಿ ಜಿಲ್ಲೆಯಲ್ಲಿಯೂ ಈ ಸಂಸ್ಥೆಗಳಿವೆ. ಸಂಸ್ಥೆಗಳ ಮುಖ್ಯ ಉದ್ದೇಶವೆಂದರೆ ಯೋಜನೆಯ ಕಾರ್ಯಕ್ರಮಗಳನ್ನು ತ್ವರಿತ ರೀತಿಯಿಂದ ನಡೆಯಿಸಿಕೊಂಡು ಹೋಗುವುದು, ಹಣಕಾಸಿನ ವರ್ಷದ ಕೊನೆಯಲ್ಲಿ ಹಣ ಅನುಪಯುಕ್ತವಾಗಿ ಉಳಿಯದಂತೆ ನೋಡಿಕೊಳ್ಳುವುದು, ಇದರ ಜೊತೆಗೆ ವರ್ಷದ ಪ್ರಾರಂಭಕ್ಕೆ ಯೋಜನೆಯನ್ನು ರೂಪಿಸುವಲ್ಲಿ ಮತ್ತು ಅದರ ಅನುಮೋದನೆಯಲ್ಲಿ ವಿಳಂಬವಾದಲ್ಲಿ ಹಣದ ತೊಂದರೆ ಉಂಟಾಗದಂತೆ ನೋಡಿಕೊಳ್ಳುವುದು ಆಗಿದೆ.

ಬರಗಾಲವೆಂಬುದು ಜನತೆಯನ್ನೂ ಅಭಿವೃದ್ಧಿ ಕಾರ್ಯಕ್ರಮವನ್ನೂ ಸದಾ ಬೆದರಿಸುವ ಒಂದು ಪೆಡಂಭೂತವಾಗಿದೆ. ಬರಗಾಲದ ತೀವ್ರತೆಯನ್ನು ಹೋಗಲಾಡಿಸಲು ನೀರಾವರಿಯೊಂದೇ ಮಾರ್ಗ. ಆದುದರಿಂದ ಬರಗಾಲ ಪೀಡಿತ ಪ್ರದೇಶಗಳಲ್ಲಿ ನಾವು ನೀರಾವರಿಗೆ ಆದ್ಯ ಗಮನ ಕೊಡಬೇಕು. ಈ ಸಮಸ್ಯೆಯನ್ನು ಪರಿಹರಿಸಲು ಕೇಂದ್ರ ಮತ್ತು ರಾಜ್ಯಸರಕಾರಗಳು ಸಾಕಷ್ಟು ಗಮನವನ್ನು ಕೊಟ್ಟಿವೆ. ಇವೆಲ್ಲಕ್ಕೂ ಮುಖ್ಯವಾಗಿ ಸರಕಾರ ಸಹಕಾರಿ ಬ್ಯಾಂಕು ಮತ್ತು ವಾಣಿಜ್ಯ ಬ್ಯಾಂಕುಗಳಿಂದ ಹೆಚ್ಚಿನ ಪ್ರಮಾಣದಲ್ಲಿ ಸಾಲವನ್ನು ಒದಗಿಸುವ ಪ್ರಯತ್ನ ಮಾಡಬೇಕಾಗಿದೆ. ಏಕೆಂದರೆ, ಬಹಳಷ್ಟು ಕಾರ್ಯಕ್ರಮಗಳು ಈ ಹಣವನ್ನೇ ಅವಲಂಬಿಸಿರುತ್ತವೆ.

ಸಣ್ಣ ನೀರಾವರಿ ಕಾರ್ಯಕ್ರಮದ ಜೊತೆಗೆ ಭೂಜಲ ಅಭಿವೃದ್ಧಿಯ ಕಡೆಗೂ ಗಮನ ಕೊಡಬೇಕಾಗಿದೆ. ಕೃಷಿ ಪದ್ಧತಿಯನ್ನು ಬದಲು ಮಾಡಬೇಕಾಗಿದೆ. ಮಣ್ಣಿನ ಗಾಣ ಮತ್ತು ಮಳೆಯ ಪ್ರಮಾಣವನ್ನು ನೋಡಿಕೊಂಡು ಬೇಸಾಯವನ್ನು ಬದಲಿಸಬೇಕಾಗಿದೆ. ಹೊಸ ಮಾದರಿಯ ಅಭಿವೃದ್ಧಿಯನ್ನು ಜಾರಿಯಲ್ಲಿ ತಂದು ತಂತ್ರಜ್ಞಾನ ವರ್ಗಾವಣೆಯನ್ನು ಅಳವಡಿಸಬೇಕು. ಈ ಯೋಜನೆಯಲ್ಲಿ ಕೈಗೊಳ್ಳುವ ಕಾರ್ಯಕ್ರಮಗಳು ಬರಗಾಲದ ತೀಕ್ಷ್ಣತೆಯನ್ನು ಕಡಿಮೆ ಮಾಡಲು ಮತ್ತು ಸಾಮಾಜಿಕ ನ್ಯಾಯದೊಂದಿಗೆ ನಮ್ಮ ಆರ್ಥಿಕ ಮುನ್ನಡೆ ಕುಗ್ಗದೆ ಸಾಗುವಂತೆ ಮಾಡಲು ಸಹಾಯಕವಾಗುವುದೆಂದು ಆಶಿಸಬಹುದಾಗಿದೆ.

ಬರಗಾಲ ಪೀಡಿತ ಪ್ರದೇಶದ ಸುಧಾರಣೆಗಾಗಿ ಕೈಗೊಂಡ ಕಾರ್ಯಕ್ರಮಗಳ ಜಿಲ್ಲಾವಾರು ಹಣದ ವಿತರಣೆ 1980–85 (ಲಕ್ಷ ರೂಪಾಯಿಗಳಲ್ಲಿ)

| ಕ್ಷೇತ್ರ | ಬೆಳಗಾಂವಿ | ಚಿತ್ರದುರ್ಗ | ಚಿಕ್ಕ ಮಗಳೂರು | ತುಮಕೂರು | ಧಾರವಾಡ | ಬಳ್ಳಾರಿ | ಕೋಲಾರ | ಗುಲ್ಬರ್ಗ | ರಾಯಚೂರು | ಬಿಜಾಪುರ | ಒಟ್ಟು |
|---|---|---|---|---|---|---|---|---|---|---|---|
| 1 ಸಣ್ಣ ನೀರಾವರಿ: | | | | | | | | | | | |
| ಸಣ್ಣ ನೀರಾವರಿ | 118.040 | 138.720 | 14.552 | 81.000 | 73.000 | 49.360 | 143.040 | 88.010 | 57.800 | 197.180 | 960.702 |
| ಭೂಜಲ ಅಭಿವೃದ್ಧಿ | 10.000 | 2.500 | — | — | 67.000 | 0.800 | 9.600 | — | — | — | 89.900 |
| 2 ಭೂಸಾರ ರಕ್ಷಣೆ ಮತ್ತು ಒಣ ಬೇಸಾಯ | 50.346 | 18.220 | 11.676 | 51.442 | 43.930 | 20.250 | 37.000 | 15.604 | 19.540 | 150.710 | 418.718 |
| 3 ಅರಣ್ಯಾಭಿವೃದ್ಧಿ | 45.000 | 61.000 | 15.532 | 37.387 | 35.020 | 26.440 | 161.004 | 38.000 | 16.894 | 73.910 | 510.187 |
| 4 ತೋಟಗಾರಿಕೆ | 17.902 | 18.367 | 5.810 | 17.190 | 24.125 | 8.240 | 34.000 | 15.969 | 12.480 | 33.260 | 187.343 |
| 5 ಮೀನುಗಾರಿಕೆ | 20.600 | 12.415 | 5.150 | 15.983 | 8.500 | 4.990 | 35.000 | 12.400 | 5.800 | 31.930 | 152.768 |
| 6 ಪಶುಸಂಗೋಪನೆ | 54.000 | 47.230 | 12.063 | 41.010 | 44.975 | 20.420 | 71.000 | 19.740 | 15.585 | 248.130 | 574.153 |
| 7 ರೇಷ್ಮೆ ವ್ಯವಸಾಯ | 40.000 | 55.298 | 7.345 | 38.250 | 29.070 | 18.450 | 62.200 | 18.300 | 10.161 | 57.030 | 344.104 |
| 8 ಜೇನು ಸಾಕಾಣಿಕೆ | — | — | 2.122 | 6.608 | — | — | 13.500 | — | — | — | 22.230 |
| 9 ಸಹಕಾರಿ ಸಂಘಗಳಿಗೆ ಧನಸಹಾಯ | 10.000 | 6.000 | — | 1.130 | 34.780 | 1.050 | 8.800 | 4.000 | 1.900 | 245.070 | 312.730 |
| 10 ಆಡಳಿತ | 14.750 | 17.500 | 0.750 | 10.000 | 17.100 | — | 10.856 | 13.000 | — | 17.750 | 101.706 |
| 11 ಬೇರೆ ಕಾರ್ಯಕ್ರಮ | — | 0.250 | — | — | — | — | — | — | — | — | 0.250 |
| ಒಟ್ಟು | 380.638 | 377.500 | 75.000 | 300.00 | 377.500 | 150.000 | 586.000 | 225.023 | 148.160 | 1.054.970 | 3.647.791 |
| ನಿಗದಿಪಡಿಸಿದ ಮೊತ್ತ | 375.000 | 377.500 | 75.000 | 300.000 | 377.500 | 150.000 | 586.000 | 225.000 | 148.000 | 825.000 | 3.439.000 |

# ಬ್ಯಾಂಕಿಂಗ್ ಸುದ್ದಿಸಾರ

ಸಂಗ್ರಹ : ಸ್ಯಾಂ

### ಆದ್ಯತೆಯ ಕ್ಷೇತ್ರಗಳಿಗೆ ಮುಂಗಡದಲ್ಲಿ ಹೆಚ್ಚಳ

ಸಾರ್ವಜನಿಕ ಕ್ಷೇತ್ರದ ಬ್ಯಾಂಕುಗಳು ಆದ್ಯತೆಯ ಕ್ಷೇತ್ರಗಳಿಗೆ ನೀಡುತ್ತಿರುವ ತಮ್ಮ ಮುಂಗಡದ ಪ್ರಮಾಣವನ್ನು ಈಗಿನ ಸೇ. 33⅓ಯಿಂದ 1985ರ ವೇಳೆಗೆ ಸೇ. 40ಕ್ಕೆ ಏರಿಸಬೇಕಾಗಿದೆ. ಈ ನಿರ್ಧಾರವನ್ನು ಈ ವರ್ಷದ ಮಾರ್ಚ್ 6ರಂದು ಹೊಸ ದೆಹಲಿಯಲ್ಲಿ ಕೇಂದ್ರ ಅರ್ಥ ಸಚಿವರು ಈ ಬ್ಯಾಂಕುಗಳ ಮುಖ್ಯ ಆಡಳಿತಾಧಿಕಾರಿಗಳೊಡನೆ ನಡೆಸಿದ ಸಭೆಯಲ್ಲಿ ಕೈಗೊಳ್ಳಲಾಯಿತು.

### ಹರಿದ ನೋಟುಗಳ ಬದಲಾವಣೆ

ರಿಸರ್ವ್ ಬ್ಯಾಂಕ್ ನೋಟು ಮರುಪಾವತಿ ನಿಯಮಗಳನ್ನು ಸಡಿಲಿಸಿ, ರಿಸರ್ವ್ ಬ್ಯಾಂಕಿನಲ್ಲಿ ಮತ್ತು ಸರ್ಕಾರಿ ವಲಯದ ಬ್ಯಾಂಕುಗಳಲ್ಲಿ ಹರಿದ ನೋಟುಗಳ ಬದಲಾವಣೆಗಾಗಿ ಸಾರ್ವಜನಿಕರಿಗೆ ಹೆಚ್ಚಿನ ಸೌಲಭ್ಯಗಳನ್ನು ಒದಗಿಸಲಾಗಿದೆ. ಸಾರ್ವಜನಿಕರಿಗೆ ಹೆಚ್ಚಿನ ಸೌಲಭ್ಯವಾಗಿ, ರಿಸರ್ವ್ ಬ್ಯಾಂಕಿನ ಶಾಖೆಗಳಲ್ಲಿ ಮಾತ್ರ ರೂ. 10, ರೂ. 20, ರೂ. 50 ಮತ್ತು ರೂ. 100ರ ಹರಿದ ನೋಟುಗಳ ಮುಖಬೆಲೆಯ ಅರ್ಧಮೌಲ್ಯವನ್ನು ಕೊಡಲಾಗುತ್ತಿದೆ. ಬದಲಾವಣೆಗಾಗಿ ನೀಡಿದ ನೋಟಿನ ಚೂರು ಅಥವಾ ಚೂರುಗಳಲ್ಲಿ ಒಂದರ ವಿಸ್ತೀರ್ಣ ಇಡೀ ನೋಟಿನ ವಿಸ್ತೀರ್ಣದ ಅರ್ಧಕ್ಕಿಂತ ಕಡಿಮೆ ಇಲ್ಲದೆ ಇದ್ದು, ಆ ಚೂರಿನ ಕನಿಷ್ಠ ಒಂದು ಜಾಗದಲ್ಲಿಯಾದರೂ ನೋಟಿನ ಕ್ರಮಸಂಖ್ಯೆಯಿರುವ ಪ್ರಧಾನ ಭಾಗ ಗುರುತಿಸಲು ಸಾಧ್ಯವಾಗುವಂತಿದ್ದರೆ ಈ ಹೆಚ್ಚಿನ ಸೌಲಭ್ಯ ಪ್ರಾಪ್ತ.

### ಸ್ಟೇಟ್ ಬ್ಯಾಂಕ್ ಆಫ್ ಇಂಡಿಯದ ವಿಕ್ರಮ

ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ 6.000 ಶಾಖೆಗಳ ಬೃಹತ್ ಜಾಲವುಳ್ಳ ಜಗತ್ತಿನ ಪ್ರಪ್ರಥಮ ವಾಣಿಜ್ಯ ಬ್ಯಾಂಕ್ ಆಗಿದೆ. ಬ್ಯಾಂಕುಗಳ ರಾಷ್ಟ್ರೀಕರಣವಾದಾಗ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯ 1,500ಕ್ಕೂ ಹೆಚ್ಚಿನ ಶಾಖೆಗಳನ್ನು ಹೊಂದಿತ್ತು. ಅಂದಿನಿಂದ ಅದು ವರ್ಷೇ ವರ್ಷೇ ಅಧಿಕ ಹೆಚ್ಚಳವನ್ನು ಸಾಧಿಸಿದೆ.

### ಕೃಷಿ ಸಂಶೋಧಕರಿಗೆ ಅಂತರ ರಾಷ್ಟ್ರೀಯ ನೆರವು

ಭಾರತದಲ್ಲಿ ಒಂದು ಹೊಸ ರಾಷ್ಟ್ರೀಯ ಕೃಷಿ ಸಂಶೋಧನ ಕಾರ್ಯಕ್ರಮಕ್ಕಾಗಿ 2.7 ಕೋಟಿ ಡಾಲರುಗಳ ನೆರವು ನೀಡುವುದಾಗಿ ಅಂತರರಾಷ್ಟ್ರೀಯ ಅಭಿವೃದ್ಧಿ ಸಂಘ (ಐ.ಡಿ.ಎ.) ಪ್ರಕಟಿಸಿದೆ. ರೈತರಿಗೆ ಬೇಕಾಗುವ ನವೀನ ತಂತ್ರ ಮತ್ತು ಮಾಹಿತಿಗಳು ಹಾಗೂ ಸಂಶೋಧನೆ—ಇವುಗಳ ನಡುವಿನ ಅಂತರವನ್ನು ಕಡಿಮೆಗೊಳಿಸಲು ಈ ಹಣವನ್ನು ಬಳಸಲಾಗುವುದೆಂದು ವಿಶ್ವಬ್ಯಾಂಕಿನ ಅಂಗ ಸಂಸ್ಥೆಯಾದ ಅದು ಹೇಳಿದೆ. 50 ವರ್ಷಗಳ ಅವಧಿಯ ಈ ನೆರವು ಬಡ್ಡಿರಹಿತವಾದುದಾದರೂ, ಆಡಳಿತ ವೆಚ್ಚಗಳಿಗಾಗಿ ಸೇ. 0.0075ರ ಸೇವಾಶುಲ್ಕವನ್ನು ವಿಧಿಸಲಾಗುತ್ತದೆ.

### ಪಠ್ಯ ವಿಷಯವಾಗಿ ಗ್ರಾಮೀಣ ಬ್ಯಾಂಕಿಂಗ್

ವಿಶ್ವವಿದ್ಯಾಲಯ ಅನುದಾನ ಆಯೋಗ ಕೈಗೊಂಡಿರುವ ಪಠ್ಯ ವಿಷಯಗಳ ಪುನರ್ರಚನಾ ಕಾರ್ಯಕ್ರಮದನ್ವಯ ಸೂರ್ಯಾಪೇಟೆಯ ಶ್ರೀ ವೆಂಕಟೇಶ್ವರ ಕಾಲೇಜಿನಲ್ಲಿ ಗ್ರಾಮೀಣ ಬ್ಯಾಂಕಿಂಗ್ ಎಂಬ ಹೊಸ ಪಠ್ಯ ವಿಷಯವನ್ನು ಆರಂಭಿಸಲಾಗಿದೆ.

### ಬ್ಯಾಂಕುಗಳ ನಗರ

ಚಂಡೀಗಢ ಜಗತ್ತಿನಲ್ಲಿಯೇ ಅತ್ಯಂತ ಹೆಚ್ಚು ಬ್ಯಾಂಕ್ ಶಾಖೆಗಳನ್ನು ಹೊಂದಿರುವ ನಗರವಾಗಿದೆ. ಅಲ್ಲಿ ಪ್ರತಿ 4,000 ಜನರಿಗೊಂದರಂತೆ ಬ್ಯಾಂಕ್ ಶಾಖೆಗಳಿವೆ. ಅಲ್ಲಿರುವ

ಬ್ಯಾಂಕು ಶಾಖೆಗಳ ಸಂಖ್ಯೆ 80ಕ್ಕೂ ಹೆಚ್ಚಾಗಿದೆ. ಚಂಡೀಗಢದಲ್ಲಿ ಇಷ್ಟೊಂದು ಬ್ಯಾಂಕ್ ಶಾಖೆಗಳಿದ್ದರೂ ಎಲ್ಲವೂ ಲಾಭದಾಯಕವಾಗಿಯೇ ಕೆಲಸ ಮಾಡುತ್ತಿವೆ. ರಾಜ್ಯಗಳನ್ನು ತೆಗೆದುಕೊಂಡರೆ ಅತ್ಯಧಿಕ ಸಂಖ್ಯೆಯ ಬ್ಯಾಂಕ್ ಶಾಖೆಗಳುಳ್ಳ ರಾಜ್ಯ ಪಂಜಾಬು. ಆ ರಾಜ್ಯದಲ್ಲಿ ಪ್ರತಿ 11,000 ಜನರಿಗೆ ಒಂದು ಬ್ಯಾಂಕ್ ಶಾಖೆ ಇದೆ.

### ಮಾಜಿ ಡಕಾಯಿತರ ಪುನರ್ವ್ಯವಸ್ಥೆಗೆ ಬ್ಯಾಂಕ್ ನೆರವು

ಮುಜಫರ್‌ಪುರದ ಸುಮಾರು 102 ಮಂದಿ ಡಕಾಯಿತರು ಸೆಂಟ್ರಲ್ ಬ್ಯಾಂಕ್ ಆಫ್ ಇಂಡಿಯದಿಂದ 1.40 ಲಕ್ಷ ರೂ.ಗಳನ್ನು ತೆಗೆದುಕೊಂಡಿದ್ದಾರೆ. ಆದರೆ ಈ ಬಾರಿ ಅವರು ಹಣ ಪಡೆದಿದ್ದು ಬಂದೂಕು ತೋರಿಸಿ ಅಲ್ಲ. ಸೆಂಟ್ರಲ್ ಬ್ಯಾಂಕ್ ಆಫ್ ಇಂಡಿಯ ಈ ಹಣವನ್ನು ಈ ಸುಧಾರಿತ ಡಕಾಯಿತರಿಗೂ ಮತ್ತಿತರ ಮಾಜಿ ಅಪರಾಧಿಗಳಿಗೂ ಅವರು ಸಾಮಾನ್ಯ ಪ್ರಜೆಗಳಂತೆ ಉತ್ತಮ ಜೀವನ ನಡೆಸುವಂತಾಗಲು ಸಾಲವಾಗಿ ನೀಡಿದೆ. ಈ ಮುನ್ನ ಡಕಾಯಿತರು ತಮ್ಮ ಕುಕೃತ್ಯಗಳನ್ನು ಬಿಟ್ಟು ಸ್ವತಃ ಶರಣಾಗತರಾಗಿದ್ದರು. ಸೆಂಟ್ರಲ್ ಬ್ಯಾಂಕ್ ಆಫ್ ಇಂಡಿಯ ನೀಡಿದ ಸಾಲ ಅವರು ಸ್ವಾವಲಂಬಿಗಳಾಗಿ ಬಾಳಲು ನೆರವಾಗುತ್ತದೆ. ಬ್ಯಾಂಕಿನ ಸಹಾಯಕ ಪ್ರಧಾನ ವ್ಯವಸ್ಥಾಪಕರು ಸಭೆಯೊಂದರಲ್ಲಿ ಮಾತನಾಡುತ್ತ, ಬ್ಯಾಂಕು ಈ ಸುಧಾರಿತ ಅಪರಾಧಿಗಳಿಗೆ ಜೀವನೋಪಾಯಗಳನ್ನು ಕಲ್ಪಿಸಿಕೊಡುವುದೆಂದೂ, ಅವರಲ್ಲಿ ಕೆಲವರಿಗೆ ತಮ್ಮ ಬ್ಯಾಂಕಿನಲ್ಲೇ ಉದ್ಯೋಗ ಒದಗಿಸಬಹುದೆಂದೂ ಹೇಳಿದರು.

### ಬಡತನದ ಮಟ್ಟ

ಸರಕಾರ ದಾರಿದ್ರ್ಯ ರೇಖೆಯನ್ನು ಗ್ರಾಮೀಣ ಪ್ರದೇಶಗಳಲ್ಲಿ ತಿಂಗಳಿಗೆ 61.80 ರೂ. ವಾರ್ಷಿಕ ವರಮಾನವೆಂದೂ ನಗರ ಪ್ರದೇಶಗಳಲ್ಲಿ 71.30 ರೂ.ಗಳೆಂದೂ ,1976–77ರ ಬೆಲೆಗಳ ಮಟ್ಟದಲ್ಲಿ ನಿಗದಿಗೊಳಿಸಿದೆ. ಗ್ರಾಮೀಣ ಪ್ರದೇಶಗಳಲ್ಲಿ ಪ್ರತಿ ವ್ಯಕ್ತಿಗೆ ಪ್ರತಿ ದಿನಕ್ಕೆ 2,400 ಕ್ಯಾಲೊರಿಗಳಷ್ಟು ಪೌಷ್ಟಿಕಾಂಶವನ್ನೂ ನಗರ ಪ್ರದೇಶಗಳಲ್ಲಿ 2,100 ಕ್ಯಾಲೊರಿಗಳಷ್ಟು ಪೌಷ್ಟಿಕಾಂಶವನ್ನೂ, ದಾರಿದ್ರ್ಯ ರೇಖೆಯನ್ನು ನಿರ್ಧರಿಸಲು ಆಧಾರವಾಗಿ 1978–83ರ ಯೋಜನೆಯ ಕರಡಿನಲ್ಲಿ (ಹಿಂದಿನದು) ಇಟ್ಟುಕೊಳ್ಳಲಾಗಿತ್ತು.

# ಪತ್ರವ್ಯವಹಾರದಲ್ಲಿ ಸೌಜನ್ಯ

ಅನುವಾದ: ಸೂ. ಸುಬ್ರಹ್ಮಣ್ಯಂ

**ರಾಯಲ್ ಬ್ಯಾಂಕ್ ಆಫ್ ಕೆನಡ ಮಾಸ ಪತ್ರದ ಲೇಖನವೊಂದನ್ನು ಆಧರಿಸಿ ಬರೆದಿರುವ ಈ ಲೇಖನದಲ್ಲಿ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಒಳ್ಳೆಯ ಪತ್ರ-ವ್ಯವಹಾರದ ಪ್ರಾಮುಖ್ಯವನ್ನು ವಿವೇಚಿಸಲಾಗಿದೆ**

ಪತ್ರಗಳನ್ನು ಬರೆಯುವುದೊಂದು ಕೌಶಲ. ಸೌಜನ್ಯಯುತ ಪತ್ರಗಳನ್ನು ಬರೆಯುವುದು ನಾವು ಗಳಿಸಿ ಬೆಳೆಸಿಕೊಳ್ಳಬೇಕಾದ ಒಂದು ಸಾಮಾಜಿಕ ಕಲೆ.

ಸ್ನೇಹಕ್ಕೆ ಚ್ಯುತಿ ಬಾರದಂತೆ ಕೋರಿಕೆಯೊಂದನ್ನು ನಯವಿನಯದಿಂದ ನಿರಾಕರಿಸುವುದು ಹಾಗೂ ಸಾಲ ಕೊಡುವಾಗ ಭವಿಷ್ಯದ ಎಲ್ಲ ವ್ಯವಹಾರಗಳನ್ನೂ ಹಾಳುಮಾಡಿಕೊಳ್ಳುವಷ್ಟು ನಿಷ್ಠುರವಾಗಿ ವ್ಯವಹರಿಸದಿರುವುದು—ಇದೇ 'ಸೌಜನ್ಯ'ಕ್ಕೆ ನಾವು ಕೊಡಬಹುದಾದ ಅರ್ಥ.

ರೀತಿನೀತಿ ಮತ್ತು ನಡತೆಗಳನ್ನು ಕ್ಷುಲ್ಲಕವೆಂದಾಗಲಿ, ಅಪ್ರಧಾನವೆಂದಾಗಲಿ ಪರಿಗಣಿಸಿ ತಿರಸ್ಕರಿಸಲಾಗದು. ಅಂತರರಾಷ್ಟ್ರೀಯ ರಾಜಕಾರಣದಲ್ಲಿ ನಿರತರಾದವರಿಂದ ಹಿಡಿದು ಸಂಸಾರದ ರಥವನ್ನು ಸಾಗಿಸುವ ದಂಪತಿಗಳ ವರೆಗೆ ಪ್ರತಿಯೊಬ್ಬರ ಬದುಕಿನಲ್ಲಿಯೂ ಇವು ಗಮನಾರ್ಹ ವಿಷಯಗಳಾಗಿರುತ್ತವೆ. ಉದ್ಯಮದಲ್ಲಿ ನಮ್ಮ ಘನತೆ ಗೌರವಗಳನ್ನು ನಮ್ಮ ನಡಾವಳಿಯ ರೀತಿನೀತಿಗಳು ಎತ್ತಿ ತೋರಿಸುತ್ತವೆ.

## ಸಭ್ಯವರ್ತನೆ

ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಸಂಸ್ಕೃತಿಯ ಸಂಕೇತ ವ್ಯವಸ್ಥೆಯೊಳಗೇ ವ್ಯವಹರಿಸಬೇಕಾದುದು ಅಗತ್ಯ. ತನ್ನ ಜೊತೆಯವರು ಗೌರವಿಸುವ ಗುಣಗಳನ್ನು ತಾನು ಹೊಂದಿರುವೆನೆಂದು ಪ್ರದರ್ಶಿಸಲು ಪ್ರತಿ ವ್ಯಕ್ತಿಯೂ ಸಾಮಾನ್ಯವಾಗಿ ಸಮಾಜ ಸಮ್ಮತಿಸಿರುವ ವರ್ತನೆಗಳನ್ನು ಬಳಸುತ್ತಾನೆ.

"ಉತ್ತಮ ನಡತೆ ನೆರೆಹೊರೆಯ ಉತ್ಕೃಷ್ಟತೆಗೆ ಕಾರಣ. ಅದರ ಕೊರತೆಯಿರುವಲ್ಲಿ ಯಾವ ಬುದ್ಧಿವಂತನೂ ನೆಲೆಸುವುದಿಲ್ಲ," ಎಂದು ಸುಪ್ರಸಿದ್ಧ ಚೀನಿ ತತ್ತ್ವಜ್ಞಾನಿ ಕನ್‌ಫ್ಯೂಷಿಯಸ್ ಹೇಳಿದ್ದಾನೆ.

ಕೆಲವರೆನ್ನುವಂತೆ, ಮತೀಯ ಆಧಿಪತ್ಯದಿಂದ ಕೈಗಾರಿಕಾ ಕ್ರಾಂತಿಯ ಮೂಲಕ ಇಂದಿನ ಸಂಪದಭಿವೃದ್ಧಿಯ ಯುಗಕ್ಕೆ ಹಿಮ್ಮುಖವಾಗಿ ಸಮಾಜ ನಡೆದು ಬಂದಿದೆ. ಅದರ ಜೊತೆಗೇ ನಮ್ಮ ನಡಾವಳಿಗಳೂ ಪ್ರಗತಿಪರವಾಗಿ ಕೀಳ್ತರನಾಗುತ್ತಿರುವುದೆಂಬ ಅವರ ಹೇಳಿಕೆಯಲ್ಲಿ ಸ್ವಲ್ಪ ಸತ್ಯಾಂಶವೂ ಇರಬಹುದು. ಪ್ರಜಾಸತ್ತಾತ್ಮಕ ಮನೋಧರ್ಮದ ಬೆಳವಣಿಗೆಯಲ್ಲಿರುವ ಅಪಾಯಗಳಲ್ಲೊಂದೆಂದರೆ ಪ್ರಜಾಸತ್ತೆಯಲ್ಲದ ಶಿಸ್ತಿನಿಂದ ಬಿಡುಗಡೆಯನ್ನು ಪ್ರದರ್ಶಿಸುವ ದ್ಯೋತಕವೆಂದು ಜನರು ಕೆಟ್ಟ ನಡವಳಿಕೆಗಳನ್ನು ಅನುಸರಿಸತೊಡಗುವುದು. ತಮ್ಮ ಅಧಿಕಾರವು ಅವರ ಸ್ವಾತಂತ್ರ್ಯದಷ್ಟೇ ಕರ್ತವ್ಯಗಳನ್ನು ಹೊಂದಿರುತ್ತದೆ ಎಂಬುದರ ಅರಿವು ಇನ್ನೂ ಮೂಡದಿರುವುದರ ಪರಿಣಾಮವಿದು.

ಸಭ್ಯವರ್ತನೆಯನ್ನು ಹೇಗೆ ಸೂತ್ರೀಕರಿಸುವುದು? ಒಳ್ಳೆಯ ನಡತೆಯೆಂದರೆ, ನೀವು ಮಾಡಬೇಕೆಂಬ ನಿರ್ಬಂಧವಿಲ್ಲದಿದ್ದರೂ ನೀವು ಮಾಡಬೇಕಾದುದನ್ನು ಮಾಡಿಯೇ ತೀರುವುದು ಎಂದು ಹೇಳಬಹುದು. ಅಂದರೆ, ಮತ್ತೊಬ್ಬರ ಬಗೆಗೆ ವಿಶ್ವಾಸ ತೋರಿಸುವುದು, ಯಾವುದೇ ಬಗೆಯ ಅನ್ಯಾಯ ಲಾಭವನ್ನು ಪಡೆಯದಿರುವುದು, ಜನಮನವನ್ನು ನೋಯಿಸುವ ವ್ಯಕ್ತಿಗಳಿಂದ ದೂರವಿರುವುದು ಮತ್ತು ಎಂದೂ ಉದ್ದೇಶಪೂರ್ವಕವಾಗಿ ಅನುಚಿತವಾಗಿ ವರ್ತಿಸದಿರುವುದು ಎಂದರ್ಥ.

ಕಾನೂನಿಗಿಂತಲೂ ಹೆಚ್ಚು ಮುಖ್ಯವಾದದ್ದು ನಡತೆ. ಕಾನೂನಾದರೋ ನಮ್ಮನ್ನು ಈಗೊಮ್ಮೆ ಆಗೊಮ್ಮೆ ಮತ್ತು ಅಲ್ಲಿ ಇಲ್ಲಿ ಸಂಪರ್ಕಿಸುತ್ತದೆ. ಆದರೆ ನಡತೆ ನಮ್ಮನ್ನು ಸಂತೋಷಗೊಳಿಸುತ್ತದೆ ಅಥವಾ ಬೇಸರಗೊಳಿಸುತ್ತದೆ—ಸತತವಾಗಿ. ಅದು ನಮ್ಮನ್ನು ಉತ್ತಮರನ್ನಾಗಿ ಅಥವಾ ಕೀಳಾಗಿ ಮಾಡುತ್ತದೆ. ಮೋಸಸ್ 'ಮಹಾ

ನ್ಯಾಯದಾತ'ನೆಂದೇ ಪ್ರಖ್ಯಾತ. ಮುಖ್ಯವಾಗಿ, ಅವನು ಪತ್ತು ಕಟ್ಟಳೆಗಳನ್ನು ನಿರೂಪಿಸಿದನೆಂಬುದೇ ಅವನ ಖ್ಯಾತಿಗೆ ಕಾರಣ. ಆದರೆ ನಡಾವಳಿಯ ಕ್ಷೇತ್ರವನ್ನೂ ಅವನು ಪ್ರವೇಶಿಸಿದ. ಅವನು ಒಂದು ಸುವ್ಯವಸ್ಥಿತ ಸಮಾಜದ 'ಅವಶ್ಯ'ಗಳನ್ನೂ ದಾಟಿ ಮುಂದೆ ಹೋಗಿದ್ದಾನೆ. ಸುಜನರ ನಡತೆ ಎಂತಿರಬೇಕೆಂಬುದನ್ನೂ ಅವನು ನಿರೂಪಿಸಿದ್ದಾನೆ. ಸಂಕಟದಲ್ಲಿರುವವರಲ್ಲಿ ಕರುಣೆ, ಹರಟೆಯಲ್ಲಿ ವೃಥಾ ಕಾಲ ಹರಣ ಮಾಡದಿರುವುದು, ಹಿರಿಯರಲ್ಲಿ ಗೌರವ, ಮತ್ತು ಅಪರಿಚಿತರಲ್ಲಿಯೂ ಔದಾರ್ಯ—ಇವೇ ಆ ಗುಣಲಕ್ಷಣಗಳು.

ನೀವು ಬದುಕಿನಲ್ಲಿ ಯಾವುದೇ ಮಟ್ಟದಲ್ಲಿದ್ದರೂ ಅಥವಾ ಎಷ್ಟೇ ವಿದ್ಯಾವಂತರಾಗಿದ್ದರೂ ನಿಮ್ಮ ಜೊತೆಯವರೊಡನೆ ಸೌಜನ್ಯದಿಂದ ವರ್ತಿಸಬೇಕಾದ್ದು ನಿಮ್ಮ ಕರ್ತವ್ಯ. ಸರ್ ವಿನ್‌ಸ್ಟನ್ ಚರ್ಚಿಲ್ಲರ ಜೀವನದ ಒಂದು ಘಟನೆ ಇಲ್ಲಿ ಉಲ್ಲೇಖಾರ್ಹವೆನಿಸುತ್ತದೆ. ಕ್ರಿ.ಶ. 1941ರ ಮೇ ತಿಂಗಳ ಒಂದು ದಿನ ಹೌಸ್ ಆಫ್ ಕಾಮನ್ಸ್‌ನಲ್ಲಿ ಒಮ್ಮೆ ಆಗಲೇ ಎದ್ದು ಕ್ರೀಟ್‌ನಲ್ಲಿ ನಡೆಯುತ್ತಿದ್ದ ಯುದ್ಧದ ಬಗ್ಗೆ ಅಷ್ಟೇನೂ ಸಂತೋಷದಾಯಕವಲ್ಲದ ಸುದ್ದಿಯನ್ನು ಅವರು ಸಭೆಗೆ ಹೇಳಿದ್ದರು. ಆದರೆ ಒಂದು ಸಂತೋಷಕರ ಸುದ್ದಿ ಅನಂತರ ಬಂದು ಅದನ್ನವರು ಸಭೆಗೆ ತಿಳಿಸಬೇಕಾಯಿತು. "ಸಭೆಯ ಕಲಾಪದ ಮಧ್ಯೆ ಒಂದು ಕ್ಷಣ ಪ್ರವೇಶಿಸುವುದರ ಔಚಿತ್ಯದ ಬಗ್ಗೆ ಅತ್ಯಂತ ಗೌರವಪೂರ್ವಕವಾಗಿ ನಾನು ಚಿಂತಿಸುತ್ತಿದ್ದೇನೆ. ಇದೀಗ ಬಿಸ್ಮಾರ್ಕ್‌ನ ಮುಳುಗಡೆಯ ಸುದ್ದಿ ನನಗೆ ತಲುಪಿದೆ" ಎಂದು ಸಭೆಯ ಕಲಾಪಗಳನ್ನು ಸ್ವಲ್ಪ ಕಾಲ ತಡೆಹಿಡಿದುದಕ್ಕೆ ಕ್ಷಮೆಯನ್ನು ಕೋರುತ್ತಾ ನುಡಿದರು.

ಸಭ್ಯ ನಡವಳಿಕೆಯು ಕಲೆಗಳೆಲ್ಲದರ ಕಲೆಯಾದ ಚತುರತೆಯನ್ನು ಒಳಗೊಂಡಿದೆ. ಚತುರತೆಯೆಂದರೆ ಮತ್ತೊಬ್ಬರನ್ನು ಅಲಕ್ಷಿಸದಂತೆ ಆಸಕ್ತಿ ಮತ್ತು ಸ್ವಲ್ಪ ಶ್ರಮವನ್ನು ವಹಿಸುವುದು ಹಾಗೂ ಉಪಕಾರದ ಕೆಲಸವನ್ನು ಆಹ್ಲಾದಕರವಾಗಿ ಮಾಡಿಕೊಡುವುದು ಎಂದು ಅರ್ಥ. ಜನರೊಡನೆ ವ್ಯವಹರಿಸುವಲ್ಲಿ ಮಹಾನಾಯಕರು ಚತುರರಾಗಿರುತ್ತಾರೆ. ಬೇರೆಯವರು ಅಲಕ್ಷಿಸುವ ವಿಷಯಗಳ ಬಗ್ಗೆ ಅವರು ಅನೇಕ ಮುನ್ನೆಚ್ಚರಿಕೆಗಳನ್ನು ವಹಿಸಿರುತ್ತಾರೆ.

## ಪತ್ರಗಳನ್ನು ಬರೆಯುವಾಗ

ನೀವು ಎಂದಾದರೊಮ್ಮೆ ನಿಮ್ಮ ಪತ್ರಗಳಲ್ಲಿ ನಿಮ್ಮತನ ಎಷ್ಟರ ಮಟ್ಟಿಗೆ ಪ್ರದರ್ಶಿತವಾಗಿದೆಯೆಂಬುದನ್ನು ತಿಳಿಯಲು ಯತ್ನಿಸಿರುವಿರಾ? ತನ್ನ ಶಕ್ತಿ ಸಾಮರ್ಥ್ಯವನ್ನು ಪರೀಕ್ಷಿಸಿಕೊಳ್ಳಲು ಬಂದ ತರುಣನೊಬ್ಬನನ್ನು ಕುರಿತು ವಿಖ್ಯಾತ ತತ್ತ್ವಜ್ಞಾನಿ ಸಾಕ್ರಟೀಸ್ "ನಿನ್ನತನ ನನಗೆ ಅಭಿವ್ಯಕ್ತವಾಗುವಂತೆ ಮಾತನಾಡು," ಎಂದನಂತೆ. ಜನ ತಮ್ಮ ಪತ್ರಗಳಲ್ಲಿ ತಮ್ಮತನವನ್ನು ಪ್ರದರ್ಶಿಸುತ್ತಾರೆ ಮತ್ತು ತಮ್ಮೆಲ್ಲ ವೈಶಿಷ್ಟ್ಯಗಳನ್ನು ಮೂಡಿಸಿರುತ್ತಾರೆ.

ಇಂದಿನ ಬಹುಮಟ್ಟಿನ ವ್ಯವಹಾರ ಪತ್ರಮುಖೇನ ನಡೆಯುತ್ತದೆ. ಅತ್ಯಂತ ದೊಡ್ಡ ವ್ಯವಹಾರವನ್ನು ಕೂಡ ನಾವು ಆ ಮತ್ತೊಬ್ಬ ವ್ಯಕ್ತಿ ಯಾರೆಂದು ಕಾಣದೆಯೇ ಕುದುರಿಸಬಹುದು. ಆತನ ಪತ್ರಗಳಲ್ಲಿನ ಅಂಶವನ್ನು ತಿಳಿಯಲು ನಾವು ಅವನ್ನು ಅತ್ಯಂತ ಜಾಗರೂಕತೆಯಿಂದ ಓದಬೇಕಾಗುತ್ತದೆ. ಹಾಗೆಯೇ, ನಾವೇನು ಹೇಳುತ್ತಿರುವುದೆಂಬುದನ್ನು ತಿಳಿಸುವ ಸಲುವಾಗಿಯೂ ಅತ್ಯಂತ ಜಾಗರೂಕತೆಯಿಂದ ನಮ್ಮ ಪತ್ರವನ್ನು ಬರೆಯಬೇಕಾಗುತ್ತದೆ.

ಇದಕ್ಕಿಂತ ಮಿಗಿಲಾಗಿ, ನಾವು ಸೌಹಾರ್ದಯುತವಾಗಿ ಪತ್ರ ಬರೆಯಬೇಕಾಗುತ್ತದೆ. ನಾವು ಬರೆಯುತ್ತಿರುವ ಪತ್ರವನ್ನು ಕೇವಲ ಕಾಟಾಚಾರಕ್ಕಾಗಿ ಅಥವಾ ನಿಯಮಾನುಸಾರವಾಗಿ ಬರೆಯದೆ ಸಂತೋಷದಿಂದ ಬರೆಯುತ್ತಿರುವೆವೆಂಬ ಭಾವನೆಯನ್ನು ಅಭಿವ್ಯಕ್ತಪಡಿಸುವುದು ಸಭ್ಯತೆಯ ಲಕ್ಷಣ.

ಹಗೆತನದ ಎದುರಿಗೇ ಸಮರಸತೆಯ ಅಭಿವ್ಯಕ್ತಿಯಾದರೂ ಸಹ ಅದು ನಿಮ್ಮ ಸಂತೋಷಕ್ಕೊಂದು ಪ್ರಮುಖ ಸಾಧನ. ಅಸಭ್ಯ ಪತ್ರವ್ಯವಹಾರದಿಂದ ನೀವು ನಿಮ್ಮ ಘನತೆಯನ್ನು ಕುಗ್ಗಿಸಿಕೊಳ್ಳುವಿರಿ ಮತ್ತು ನಿಮಗೆ ಬರುವ ಉತ್ತರಕ್ಕೆ ಅದೊಂದು ಮಾದರಿಯಾಗಲೂ ಬಹುದು. ಸ್ಥಳೀಕರ ಹಾಗೂ ಸಹೋದ್ಯೋಗಿಗಳ ಅಹಿತಕರ ಹೇಳಿಕೆಗಳನ್ನು, ಕಟಕಿ ಕುಹಕಗಳನ್ನು ಮನಸ್ಸಿಗೆ ತಂದುಕೊಳ್ಳದಿರುವುದೇ ಹಿರಿತನದ ಸಲ್ಲಕ್ಷಣ. ನೀಟ್ಸೆಯ ಸಿದ್ಧಾಂತದಲ್ಲಿ ಬರುವ ಅತಿಮಾನವ, "ಯಾವುದು ಭಾರವೋ ಅದನ್ನು ನಾನು ಹೊರಬೇಕು; ನನ್ನ ಹೊರೆಯ ಮೇಲೆ ದುಂಬಿ ಜೀರುಂಡೆಗಳು ಬಂದು ಕುಳಿತಲ್ಲಿ ಅದಾವ ಲೆಕ್ಕ!" ಎಂದು ಹೆಮ್ಮೆ ಪಡುತ್ತಾನೆ.

ಕೋಪಾವಿಷ್ಟನಾದ ನಿಮ್ಮ ಎದುರಾಳಿಯನ್ನು ನಿರಾಯುಧನನ್ನಾಗಿ ಮಾಡಲು ಶಾಂತತೆಗಿಂತ ಮಿಗಿಲಾದುದು ಮತ್ತೊಂದಿಲ್ಲ. ಸ್ವಲ್ಪ ಅಲುಗಾಟವಾದರೂ ಸರಿ, ಅದು ಸ್ನೇಹಿತನಿಂದ ಬಂದುದೇ ಅಥವಾ ಶತ್ರುವಿನಿಂದ ಬಂದುದೇ ಎಂದು ಕಾಣುವ ಮೊದಲೇ ನಾಯಿಗಳು ಬಗುಳತೊಡಗುತ್ತವೆ. ಆದರೆ ಮನುಷ್ಯನ ವಿಚಾರಶಕ್ತಿ ಅವನು ಯಾವುದನ್ನೇ

ಕುರಿತು ವಿವೇಚಿಸುವ ಅವಕಾಶವನ್ನು ಕಲ್ಪಿಸಿಕೊಟ್ಟಿದೆ. ಕೋಪದಿಂದ ಕೆರಳಿ ಪತ್ರವೊಂದನ್ನು ಕುಹಕ ವಿಡಂಬನೆಗಳಿಂದ ಮತ್ತು ಒರಟು ದರ್ಪದಿಂದ ಬರೆಯುವುದಕ್ಕಿಂತ ಪರಿಸ್ಥಿತಿಯನ್ನು ವಿಶ್ಲೇಷಿಸಿ ಅದರ ಮೇಲೆ ನಮ್ಮ ಸ್ವಾಮ್ಯವನ್ನು ಸ್ಥಾಪಿಸುವುದರಿಂದ ನಮ್ಮ ಮುಂಗೋಪದ ಅಸಹ್ಯ ಪ್ರದರ್ಶನವನ್ನು ನಾವು ನಿವಾರಿಸಬಹುದು. ಯಾರೇ ಆಗಲಿ ತಾಳ್ಮೆಗೆಟ್ಟಾಗ ಅವರು ತಮ್ಮ ಘನತೆ ಗಾಂಭೀರ್ಯವನ್ನು, ವಿಚಾರ-ವಿವೇಚನಾ ಶಕ್ತಿಯನ್ನು, ನ್ಯಾಯಾನ್ಯಾಯ ಪರಾಮರ್ಶನ ಜ್ಞಾನವನ್ನು ಕಳೆದುಕೊಳ್ಳುತ್ತಾರೆ. ಹೀಗೆ ಪ್ರಕೋಪದಲ್ಲಿದ್ದಾಗ ಬರೆದು ನಿಮ್ಮ ಹೃದಯವನ್ನು ಹಗುರ ಮಾಡಿಕೊಳ್ಳುವುದಕ್ಕಿಂತ ನಿಮ್ಮ ಪತ್ರವನ್ನು ಮಾರನೆಯ ದಿನ ಮತ್ತೊಮ್ಮೆ ಪರಾಮರ್ಶಿಸುವುದಕ್ಕಾಗಿ ಅತ್ತ ತೆಗೆದಿಡುವುದು ಒಂದು ಒಳ್ಳೆಯ ಪದ್ಧತಿ.

ನಿಮ್ಮ ಗಮನವೆಲ್ಲ ಜನರ ಮೇಲೆ ಕೇಂದ್ರೀಕೃತವಾಗಿರಬೇಕು. ಒಬ್ಬ ಮನುಷ್ಯನ ಜ್ಞಾನಕ್ಕೆ ಬೆಲೆಕೊಟ್ಟು ಅವನ ವ್ಯಕ್ತಿತ್ವಕ್ಕೆ ಗೌರವ ತೋರುವುದು ಆತನ ಹೃದಯವನ್ನು ಗೆಲ್ಲುವ ಮಾರ್ಗಗಳಲ್ಲಿ ಅತ್ಯಂತ ನಿರ್ದುಷ್ಟವಾದವಾದಿ.

ನಿಮಗೇ ತಿಳಿಯದ ವಿಷಯಗಳ ಬಗೆಗೆ ಮತ್ತೊಬ್ಬರ ಹೇಳಿಕೆ ಅಥವಾ ಬರವಣಿಗೆಯನ್ನು ಕುರಿತು ಹಗುರವಾಗಿ ಟೀಕಿಸುವುದು ನಿಮ್ಮ ರೋಗಗ್ರಸ್ತ ಮನಸ್ಸಿನ ಲಕ್ಷಣವೇ ಸರಿ. ನೀವೇ ಉತ್ತಮರೆಂದು ತೋರಿಸಿಕೊಳ್ಳಬೇಕೆಂಬ ನಿಮ್ಮ ತುಡಿತ ನಿಮ್ಮ ಪ್ರತಿಷ್ಠೆಗೇ ಹಾನಿಕಾರಕವಾಗುತ್ತದೆ.

ಕಾಲಗರ್ಭದಲ್ಲಿ ಹೊಕ್ಕು ಮರೆಯಾಗಿ ಹೋಗುವುದರ ವಿರುದ್ಧ ಮಾನವ ಸತತ ಸಮರದಲ್ಲಿ ತೊಡಗಿದ್ದಾನೆ. ತನ್ನನ್ನು ಅಲಕ್ಷಿಸುವುದನ್ನು ಅವನೊಪ್ಪಲಾರ. ತನ್ನ ವೈಯಕ್ತಿಕ ಯೋಗ್ಯತೆ ಪ್ರತಿಷ್ಠೆಗಳನ್ನು ಜನ ಗುರುತಿಸಲೆಂದು ಹಂಬಲಿಸುವುದು ಒಂದು ಮೂಲಭೂತ ಮಾನವೀಯ ಅವಶ್ಯಕತೆ. ಯಾರಿಗೆ ಪತ್ರ ಬರೆಯುತ್ತೀರೋ ಅವರು ತಾವು ಸಮರ್ಥರೆಂದೂ ಪ್ರಮುಖರೆಂದೂ ಭಾವಿಸಿಕೊಳ್ಳುವ ಹಾಗೆ ನೀವು ಪತ್ರಗಳನ್ನು ಬರೆಯಬೇಕು.

ನೀವು ಪತ್ರ ಬರೆಯುತ್ತಿರುವವರ ಸ್ಥಾನಮಾನಗಳನ್ನು ಗೌರವದಿಂದ ಸೂಚಿಸುವುದನ್ನು ಸಭ್ಯ ನಡಾವಳಿ ಅಪೇಕ್ಷಿಸುತ್ತದೆ. ತಮಗೆ ಬೇಕಾದ ವಿಷಯ ತಿಳಿದರೆ ಸಾಕು. ಕೆಲವರು ನೀವು ಅವರನ್ನು ಏನೆಂದು ಕರೆದರೂ ಮನಸ್ಸಿಗೆ ಹಚ್ಚಿಕೊಳ್ಳುವುದಿಲ್ಲ. ಆದರೆ ಅಂಥವರು ಬಹಳ ಕಡಿಮೆ. ಬಹಳಷ್ಟು ಮಂದಿ ತಮ್ಮ ಹೆಸರಿನ ಬಗ್ಗೆ ಗೌರವ ತಳೆದಿರುತ್ತಾರೆ. ಮತ್ತು ನೀವೂ ಹಾಗೆಯೇ ಗೌರವ ತೋರಬೇಕೆಂದು ಅಪೇಕ್ಷಿಸುತ್ತಾರೆ. ನಿಮ್ಮ ಪತ್ರ ಸತ್ಯನಿಷ್ಠವಾಗಿದ್ದರೂ ನೀವು ಬರೆಯುವಾತನನ್ನು ಅದು ಕಿರಿಕಿರಿಗೊಳಿಸಬಾರದು. ಆತನ ಆತ್ಮಾಭಿಮಾನವನ್ನು ನೀವು ಸೂಕ್ತ ಆಹಾರದಿಂದ ಪೋಷಿಸಬೇಕು.

ನೀವು ಬೇರೆಯವರಿಗೆ ಬರೆಯುವ ಪತ್ರವನ್ನು ಅವರೇ ಅಲ್ಲದೆ ಇತರರೂ ಓದಬಹುದೆಂಬುದನ್ನು ಸದಾ ಮನಸ್ಸಿನಲ್ಲಿಟ್ಟುಕೊಂಡಿರಬೇಕು. ಆತನ ಕಾರ್ಯದರ್ಶಿ, ಸಹಾಯಕ, ಆ ಸಂಬಂಧದ ಪತ್ರವ್ಯವಹಾರಗಳಲ್ಲಿ ತೊಡಗಿರುವ ಹಾಗೂ ಇನ್ನಿತರ ನೌಕರರು ಅದನ್ನು ಓದಬಹುದು. ನೀವು ಪತ್ರ ಬರೆದಿರುವಾತನನ್ನು ಅವರೆಲ್ಲರ ದೃಷ್ಟಿಯಲ್ಲಿ ಕೀಳಾಗಿ ಕಾಣಿಸುವುದೆಂದರೆ ಅವನ ಹೃದಯವನ್ನೇ ಘಾಸಿಗೊಳಿಸಿದಂತೆ.

ಪ್ರತಿಯೊಂದು ಪತ್ರವೂ, ಅದು ಎಷ್ಟೇ ವ್ಯಾವಹಾರಿಕವಾಗಿದ್ದರೂ, ರೂಪದಲ್ಲಿ ತನ್ನದೇ ಆದ ವಿಶೇಷ ಗಾಂಭೀರ್ಯವನ್ನು ಹೊಂದಿರಲು ಸಾಧ್ಯವಿದೆ. ನೀವು ಬರೆಯಲಿರುವವರ ಮನೋಧರ್ಮಕ್ಕೆ, ಹೇಳಲಿರುವ ವಿಷಯಕ್ಕೆ ಹಾಗೂ ನಿಮಗೆ ಕೂಡ ಅದರ ವಿಶಿಷ್ಟತೆ ಹೊಂದಿಕೆಯಾಗಿರಬೇಕು. ಅಹಂಕಾರದ ಆಟಾಟೋಪ ಸಲ್ಲ; ಅತಿ ವಿನಯವೂ ಉಚಿತವಲ್ಲ.

ಯಾವುದೇ ಪತ್ರವನ್ನು ಬರೆಯಲೇಬೇಕೆಂದಾಗ, ಅದನ್ನು ಉತ್ತಮವಾಗಿಯೇ ಬರೆಯಬೇಕೆಂಬುದು ಸರ್ವಸಮ್ಮತವಾದ ಒಡಂಬಡಿಕೆ. ಈ ಕಾರ್ಯದಲ್ಲಿ ಯಾವುದೇ ಕಾರಣದಿಂದ ಲೋಪದೋಷಗಳು ನುಸುಳಲು ಅಕ್ಷಮ್ಯ ಅಪರಾಧವಾಗುತ್ತದೆ. ಒಂದು ಸಂಸ್ಥೆ ತನ್ನ ಉತ್ಪನ್ನಗಳ ಪ್ರಚಾರಕ್ಕಾಗಿ ಲಕ್ಷಾಂತರ ರೂಪಾಯಿಗಳನ್ನು ವೆಚ್ಚ ಮಾಡಬಹುದು. ಆದರೆ ಒಬ್ಬ ಅನನುಭವಿ, ಅನಾಸಕ್ತ ಅಥವಾ ವಿವೇಚನಾರಹಿತ ಗುಮಾಸ್ತೆ ಒಂದು ಕೆಟ್ಟ ಅಥವಾ ನೀರಸ ಪತ್ರ ಬರೆಯುವುದರ ಮೂಲಕ ಅವೆಲ್ಲದರ ಪರಿಣಾಮವನ್ನು ನಿರ್ನಾಮಗೊಳಿಸಬಹುದು.

ಭಾವನೆಗಳ ಯಶಸ್ವೀ ಸಂವಹನದಲ್ಲಿ ಪ್ರಾಮಾಣಿಕ ಹೆಮ್ಮೆಗೆ ಸ್ಥಾನವಿದ್ದೇ ಇದೆ. ಮಾನವ ಕುಲದ ಸೇವೆಯಲ್ಲಿ ಆಜೀವಪರ್ಯಂತ ದುಡಿದು ಹಲವಾರು ಬಿರುದು ಬಾವಲಿಗಳನ್ನು ಗಳಿಸಿದ್ದರೂ ಫ್ರಾಂಕ್ಲಿನ್ ತನ್ನ ಉಯಿಲಿನಲ್ಲಿ, "ನಾನು, ಬೆಂಜಮಿನ್ ಫ್ರಾಂಕ್ಲಿನ್, ಮುದ್ರಣಕಾರ .." ಎಂದೇ ಹೇಳಿಕೊಂಡಿದ್ದಾನೆ.

ಒಳ್ಳೆಯ ಸಂವಹನವಾಗಬೇಕಿದ್ದಲ್ಲಿ, ನಿಮ್ಮ ಪತ್ರ ಓದುಗನಿಗೆ ಉಪಯುಕ್ತವಾಗುವ ಧಾಟಿಯನ್ನು ಹೊಂದಿರಲೇಬೇಕಾಗುತ್ತದೆ. ಅದು ಸುಸ್ಪಷ್ಟವಾಗಿಯೂ ವಿಶಿಷ್ಟವಾಗಿಯೂ ಇರಬೇಕು. ನೀವು ಬಳಸುವ ಶಬ್ದಗಳು ನಿಮ್ಮ ಭಾಷೆಯೊದಗಿಸುವ ಅತ್ಯಂತ ಅರ್ಥಗರ್ಭಿತ ಶಬ್ದಗಳಾಗಿರಬೇಕಾದುದು ಅನಿವಾರ್ಯವಷ್ಟೇ ಅಲ್ಲದೆ ಅವು ಸಾಮಾನ್ಯ ಗ್ರಹಿಕೆಗೂ ಸುಲಭಸಾಧ್ಯವಾಗಿರಬೇಕು.

(ಮುಂದುವರಿಯುವುದು)

**ಕೌಂಟರಿನಾಚೆ**

# ಒಂದು ಲಾಟರಿ ಪ್ರಸಂಗ

---

**ಸುರೇಶ್ ಬೈಲೂರ್**

ವ್ಯವಹಾರದ ವೇಳೆ ಮುಗಿದಿತ್ತು. ಯಥಾಪ್ರಕಾರ ಬ್ಯಾಂಕಿನೊಳಗಡೆ 'ಕ್ಲೋಸಿಂಗ್' ಗಡಿಬಿಡಿ ನಡೆದಿತ್ತು. ಅತ್ತ ನಗದಿ ಅಧಿಕಾರಿಗಳು ನೋಟುಗಳನ್ನು ಎಣಿಸಿ ಕಟ್ಟುಗಳನ್ನು ಸಿದ್ಧಪಡಿಸುತ್ತಲೂ ಇತ್ತ ಕೌಂಟರ್ ಗುಮಾಸ್ತರುಗಳು ಖಾತೆ ಪುಸ್ತಕಗಳಲ್ಲಿ ತಲೆತೂರಿಸಿ ವೋಚರುಗಳನ್ನು ದಾಖಲಿಸುತ್ತ ಬ್ಯಾಲೆನ್ಸ್ ಸ್ಟ್ರೈಕ್ (ಸಿಲ್ಕು ಲೆಕ್ಕ) ಮಾಡುತ್ತಲೂ ಇದ್ದರು. ಆಗ ತಾನೆ ಊಟ ಮುಗಿಸಿ ಬಂದ ಪೈ, ಸ್ಪೆಷಲ್ ಜದಾಣ ಅಗಿಯುತ್ತ ಟ್ರಾನ್ಸ್‌ಫರ್ ಸ್ಕ್ರೋಲ್ (ವರ್ಗಾವಣೆ ಪಟ್ಟಿ) ಟ್ಯಾಲಿ (ತಾಳೆ) ಮಾಡುವ ಗುಂಗಿನಲ್ಲಿದ್ದ. ಆ ದಿನ ಒಂದು ವಿಶೇಷ ನಡೆಯಿತು.

ಅರೆತೆರೆದ ಬಾಗಿಲಿನಿಂದ ವಯಸ್ಸಾದ ವ್ಯಕ್ತಿಯೊಬ್ಬ ಒಳಗಡೆ ತೂರಿಕೊಂಡು ಪೈಯ ಎದುರು ಪ್ರತ್ಯಕ್ಷನಾದ. ಉರಿ ಬಿಸಿಲಿನಲ್ಲಿ ನಡೆದು ಬಂದಂತಿತ್ತು. ಮೈ ಬೆವರನ್ನು ಕೈವಸ್ತ್ರದಿಂದ ಒರೆಸಿಕೊಳ್ಳುತ್ತ. ಕೋಟನ್ನು ಅಗಲಿಸಿ ಶರ್ಟಿನ ಗುಂಡಿ ಸಡಿಲಿಸುತ್ತಾ ಪರಿಚಯದ ನಗೆ ಬೀರುತ್ತ ಕೆಮ್ಮಿದ. ಒಂದು ಕ್ಷಣ ಬಿಟ್ಟು ತಲೆ ಮೇಲೆತ್ತಿದ ಪೈ ಸಹ ಪರಿಚಯದ ನಗೆ ಬೀರಿದ. ಬಂದವನು ಹೆಗ್ಗಾರ ಶ್ರೀನಿವಾಸಯ್ಯ.

'ಏನು?' ಎನ್ನುವಂತೆ ಕೈ ಆಡಿಸಿದ ಪೈ. ಹೆಗ್ಗಾರು, ಏನೋ ಗುಟ್ಟಿನ ಸಂಗತಿ ಇದೆ ಎನ್ನುವ ಅರ್ಥದಲ್ಲಿ ಕತ್ತನ್ನು ಇನ್ನು ತಗ್ಗಿಸಿ, ಅತ್ತಿತ್ತ ನೋಡಿ ಮಾತಾಡುವ ಸಂಚಿನಲ್ಲಿದ್ದ. ಪೈ ಮಹಾಶಯನಿಗೆ ನಾಲಿಗೆ ನಡುವೆ ಹೊರಳುತ್ತಿದ್ದ ತಾಂಬೂಲ ರಸ ಅಷ್ಟು ಬೇಗ ಉಗುಳಿ ಬರಲು ಮನಸ್ಸಿರಲಿಲ್ಲವೆಂದು ಕಾಣುತ್ತದೆ. ಒಳಗಡೆ ಇದ್ದ ನನ್ನತ್ತ ಕೈ ತೋರಿಸಿ 'ಗುಳುಗುಳು' ಎಂದು ಸನ್ನೆ ಮಾಡಿದ.

ನನ್ನತ್ತ ಬಂದ ಹೆಗ್ಗಾರಿಗೆ ಕುರ್ಚಿ ತೋರಿಸಿ 'ಏನು ಬಂದದ್ದು!' ಎಂದು ಕೇಳಿದೆ. 'ಏನಿಲ್ಲ ಹೀಗೇ' ಎನ್ನುತ್ತ ಕಿಸೆಯಲ್ಲಿ ಕೈ ಹಾಕಿ ತುಂಬ ಜಾಗ್ರತೆಯಿಂದ ಕನ್ನಡಕದ ಕೇಸು ತೆಗೆದ. ಅದರೊಳಗಿಂದ ಒಂದು ಲಾಟರಿ ಟಿಕೇಟು ಇಣುಕಿತು. ನನಗನ್ನಿಸಿತು. ನೂರೋ, ಐನೂರೋ ಬಹುಮಾನ ಬಂದಿರಬೇಕು. ಆತ ಪ್ರಸ್ತಾಪಿಸುವ ಮೊದಲೇ ಹೊರಗಟ್ಟಬೇಕೆಂದು ತೋರಿತು. "ಎಸ್. ಬ್ಯಾಂಕಲ್ಲಿ ಕೂಡಲೇ ಕ್ಯಾಷ್ ಸಿಗುತ್ತದಲ್ಲ. ನಮ್ಮಲ್ಲಿ ಆದರೆ ಕಲೆಕ್ಷನ್‌ಗೆ ಕಳಿಸಿ ತರಿಸಲು ತಡವಾಗುತ್ತದೆ" ಎಂದೆ. ಬಂದ ಆಸಾಮಿಗೆ ಒಂದು ಕ್ಷಣ ಬೇಸರವಾದಂತೇ ಕಂಡಿತು. ಹೆಗ್ಗಾರು ಬಿಡಲಿಲ್ಲ. "ಅಲ್ಲಿ ಹೋಗಲು ನನಗೇನಡ್ಡಿಲ್ಲ. ನೀವೆಲ್ಲಾ ಪರಿಚಯದವರು ಎಂತಾ ಬಂದೆ. ಇದಕ್ಕೆ ಬಂಪರ್ 10 ಲಕ್ಷ ಬಂದಿದೆ" 'ಆಂ' ಎಂದು ಬಾಯಗಲಿಸಿದ ನನಗೆ ಮಿಂಚು ಹೊಡೆದಂತಾಗಿತ್ತು. ಸಾವರಿಸಿಕೊಂಡು, ಕ್ಷಣದಲ್ಲಿ ನನ್ನ ಮುಖದ ನರಗಳನ್ನು ಹಿಗ್ಗಿಸುತ್ತ "ಅಭಿನಂದನೆಗಳು, ಹೆಗ್ಗಾರು ಅವರೇ" ಎಂದೆ. "ಅರರೇ! ನೀವು ಮೊದಲೇ ಯಾಕೆ ಹೇಳಲಿಲ್ಲ? ನಮ್ಮ ಮೇಲೆ ವಿಶ್ವಾಸ ಇಟ್ಟು ಬಂದಿದ್ದೀರಲ್ಲ! ಅಡ್ಡಿಲ್ಲ, ಅಡ್ಡಿಲ್ಲ, ಈವತ್ತೇ ಟಿಕೆಟ್ಟನ್ನು ಇನ್ಶೂರ್ ಮಾಡಿಸಿ ಕಲೆಕ್ಷನ್‌ಗೆ ಕಳಿಸೋಣ. ಏನು, ಹೆಚ್ಚೆಂದರೆ ನಾಲ್ಕು ದಿನದಲ್ಲಿ ಟೆಲಿಗ್ರಾಂ ಮೂಲಕ ಪೇಮೆಂಟ್ ತರಿಸಿ ಕೊಡುತ್ತೇವೆ" ಎಂದೆ. ಕೂಡಲೇ ಪೀವನ್ನು ರಾಮಣ್ಣನಿಗೆ "ಲೋ ಹೆಗ್ಗಾರು ರಾಯರು ಬಂದವ್ರೆ ಹೋಟ್ಲಿಂದ ನಾಲ್ಕು ಕಾಫಿ ತನ್ತಾರೊ" ಎಂದು ಕಳಿಸಿದೆ. ಸಂಭ್ರಮದಿಂದ ಹೆಗ್ಗಾರುವನ್ನು ಮೇನೇಜರರಿಗೆ ಇಂಟ್ರೊಡ್ಯೂಸ್ ಮಾಡಲು ಕರೆದೊಯ್ದೆ—ಅದಾಗಲೇ ಹೆಗ್ಗಾರುವಿನ 10 ಲಕ್ಷ ಡಿಪಾಸಿಟ್ ನಾನು ಬ್ಯಾಂಕಿಗೆ

ತಂದು ಕೊಟ್ಟಿದ್ದೆಂದು ಬ್ಯಾಂಕಿನ ಮೇಲಧಿಕಾರಿಗಳಿಂದ ಶಭಾಸ್‌ಗಿರಿ ಪಡೆಯುವ ಧೂರ್ತ ಯೋಜನೆಯೂ, 'ಬ್ಯಾಂಕಿನ ಸಂಸಾರ' ಪತ್ರಿಕೆಯಲ್ಲಿ ನನ್ನ ಫೋಟೋ ಅಚ್ಚು ಹಾಕಿಸುವ ವಿಚಾರವೂ ನನಗೆ ಬಂದು ಹೋಗಿತ್ತು!

ಮೇನೇಜರ ಸಾಹೇಬರು ಕೆಲಸದ ಟೆನ್ಶನ್ ಕಡಿಮೆಯಾಗಿದ್ದುದರಿಂದ ಕಾಲು ಚಾಚಿ ಸ್ವಲ್ಪ ರಿಲಾಕ್ಸ್ ಆಗಿ ಕೂತಿದ್ದಂತಿತ್ತು. ಮೇಲೆ ತಿರುಗುತ್ತಿದ್ದ ಫ್ಯಾನು ಅವರ ಕಂಚು ತಲೆಯಲ್ಲಿ ಮಿಂಚುತ್ತಿತ್ತು. ನಮ್ಮ ಪ್ರವೇಶವಾದೊಡನೆ ಹೆಗ್ಗಾರುವಿಗೆ ಮುಗುಳ್ನಗೆಯ ಸ್ವಾಗತ ಬಯಸಿ, ಕುರ್ಚಿ ತೋರಿ ಏನು ಎನ್ನುವಂತೆ ನನ್ನೆಡೆ ನೋಡಿದರು. ವಿಷಯ ಹೇಳಿದೆ. ಕೂಡಲೆ ಸಾಹೇಬರ ಪೋಸು (ಭಂಗಿ) ನೆಟ್ಟಗಾಯ್ತು. ಕಣ್ಣರಳಿಸಿದರು. ಹೆಗ್ಗಾರುವಿನ ಕಡೆ ಒಂದು ಬಗೆಯ ಮಾದಕ ನಗು ಬೀರಿದರು! "ಸರಿ ಸರಿ, ಕಾಫಿ." "ಈಗಾಗಲೇ ಹೇಳಿಕಳಿಸಿದ್ದೇನೆ ಸಾರ್." ಎಂದೆ.

ಆಮೇಲೆ ಹೆಗ್ಗಾರುವಿಗೆ ಮೇನೇಜರರು ಲಾಟರಿಯ ಹಣದ ವಿವೇಕಯುಕ್ತ ಹೂಡಿಕೆಯ ಬಗ್ಗೆ ಉಪದೇಶ ಆರಂಭಿಸಿದರು. ಯಾವ ಯಾವ ಅವಧಿಗೆ ಎಷ್ಟೆಷ್ಟು ಬಡ್ಡಿ ಸಿಗುತ್ತದೆ ಎಂದೆಲ್ಲ ವಿವರಿಸಿದರು. ಲಾಟರಿ ಟಿಕೆಟ್ಟು ತಕೊಂಡು ಅದನ್ನು ಪ್ರೀತಿಯಿಂದ ನೇವರಿಸಿ, "ನೋಡಿ ಲಕ್ ಎಂದರೆ ಹೀಗಿರಬೇಕು" ಎಂದರು. "ಇದನ್ನು ಇನ್ಕೋರು ಮಾಡಿ ಕಳಿಸುತ್ತೇವೆ. ಎಲ್ಲಾ ಖರ್ಚೂ ನಾವೇ ಭರಿಸುತ್ತೇವೆ. ಈವತ್ತು ಸೋಮವಾರವಲ್ಲವೇ, ಶುಕ್ರವಾರದ ಹೊತ್ತಿಗೆ ನಿಮ್ಮ ಖಾತೆಯಲ್ಲಿ 10 ಲಕ್ಷ ಜಮೆಯಾಗಿರುತ್ತದೆ," ಎಂದೆಲ್ಲ ಹೇಳಿಯಾಯಿತು. ಹೆಗ್ಗಾರುವಿನ ಮುಖ ಹಿಗ್ಗಿ ಹೀರೇಕಾಯಿ ಆಗಿತ್ತು. ಸರ್ಕಾರದಲ್ಲಿ ಮೂವತ್ತು ವರ್ಷ ಸರ್ವಿಸಿನಿಂದ ರಿಟೈರಾದ ಹೆಗ್ಗಾರು ಪ್ರತಿ ತಿಂಗಳು ನೂರೈವತ್ತು ಪೆನ್ಶನ್ ಪಡೆಯಲು ಬ್ಯಾಂಕಿಗೆ ಬಂದು ಟ್ರೆಷರಿ ಬಾಕ್ಸ್ ಬರೋತನಕ ತಾಸುಗಟ್ಟಲೆ ಕಾಯುತ್ತಾ ಸೋಫಾದಲ್ಲಿ ಕೂತಿರುತ್ತಿದ್ದ ದೀನಮುದ್ರೆ ನನ್ನೆದುರು ತೇಲಿ ಹೋಯಿತು. ಈಗ ಈ ಶ್ರೀನಿವಾಸಯ್ಯ ಬ್ಯಾಂಕಿಗೆ ವ್ಯಾಲ್ಯೂಡ್ ಕಸ್ಟಮರ್.

ರಾಮಣ್ಣ ಕಾಫಿ ತಂದ. ಕಾಫಿ ಸೇವೆ ಆಯಿತು. ಮೇನೇಜರರು, "ಸರಿ, ರಿಸಲ್ಟ್ ಬಂದಿರುವ ಪತ್ರಿಕೆ ಏನಾದರೂ ತಂದಿರುವಿರೋ ಹೇಗೆ?" ಎಂದರು. ಶ್ರೀನಿವಾಸಯ್ಯ ಕಿಸೆಯಿಂದ ಕೆಲವು ನಂಬರುಗಳಿದ್ದ ಚೀಟಿ ತೆಗೆದರು. "ನೋಡಿ, ಇದೇ ನನ್ನ ಹುಡುಗನಿಗೆ ಇಂಗ್ಲಿಷ್ ಪೇಪರು ನೋಡಿ ರಿಸಲ್ಟು ಬರೆದು ತರಲು ಹೇಳಿದ್ದೆ. ಅವನು ಇದನ್ನು ತಂದುಕೊಟ್ಟು ನಾಲ್ಕು ದಿನವೇ ಆಯಿತು. ನನ್ನ ಕಿಸೆಯಲ್ಲಿ ಇಟ್ಟಿದ್ದೆ. ಆದರೆ ಲಾಟರಿ ಟಿಕೀಟು ಮರೆತು ಎಲ್ಲೋ ಇಟ್ಟಿದ್ದೆ. ಹುಡುಕಿದರೂ ಸಿಗಲಿಲ್ಲ. ಈಗ ಮಧ್ಯಾಹ್ನ ಊಟ ಮಾಡಿ ಹಾಗೇ ಅಡ್ಡಾಗಿದ್ದೆ. ನನ್ನ ಮೊಮ್ಮಗ ಇದನ್ನು ಕೈಲಿ ಹಿಡಿದು ಆಡುತ್ತಿದ್ದ. ನೋಡಿ ನಮ್ಮ ಪುಣ್ಯಕ್ಕೆ, ಅವನು ಹರಿದು ಹಾಕಲಿಲ್ಲ. ಅದನ್ನು ತಕ್ಕೊಂಡು ನೋಡಿದರೆ ಮೊದಲನೇ ನಂಬರೇ."

"ಹೂಂ, ಹೂಂ. ಆದರೂ ಒಮ್ಮೆ ಪತ್ರಿಕೆಯಲ್ಲಿ ನಾವು ರಿಸಲ್ಟ್ ನೋಡಿ ಕನ್ಫರ್ಮ್ ಮಾಡಿಕೊಳ್ಳಬೇಕಷ್ಟೆ." ಎಂದರು ಮೇನೇಜರು ಸಾಹೇಬರು.

"ಅಲ್ಲವೇ, ನಿಮಗೆ ಖಾತ್ರಿ ಮಾಡ್ಕೊಂಡೇ ಕಳಿಸ್ರಿ." ಎಂದರು ಹೆಗ್ಗಾರು.

ಈ ನಡುವೆ ರಾಮಣ್ಣ ಕಾಫಿ ತರಲು ಹೋಗಿದ್ದನಲ್ಲವೇ? ಯಾರದೋ ಕಿವಿಗೆ ಈ ಲಾಟರಿ ಹತ್ತಿದ ಸುದ್ದಿ ಹಾಕಿದ್ದ. ಸರಿ, ಆ ಚಿಕ್ಕ ಊರಲ್ಲಿ ಸುದ್ದಿ ಒಂದು ಘಳಿಗೆಯಲ್ಲಿ ವಿಷದಂತೆ ವ್ಯಾಪಿಸಿಬಿಟ್ಟಿತ್ತು. ಹತ್ತಿರವೇ ಇದ್ದ ಅರ್ಬನ್ ಬ್ಯಾಂಕಿನಿಂದ ಮೇನೇಜರರ ಫೋನು. "ಏನ್ರೀ, ಒಳ್ಳೆ ಛಾನ್ಸು ಹೊಡೆದ್ರಿ. ಎಷ್ಟು ಡಿಪಾಸಿಟ್ಟು ಕೊಡ್ತಾರಂತೆ?" ಎಂದು ನಮ್ಮ ಸಾಹೇಬ್ರಿಗೆ ಕೇಳಿದರು. ಇವರು "ಇನ್ನೂ ಡಿಸ್ಕಸ್ ಮಾಡ್ತಾ ಇದ್ದೇವೆ" ಎಂದು ಮುಂದುವರಿಸಲಿಚ್ಛಿಸದೆ ಫೋನು ಕೆಳಗಿಟ್ಟರು.

ಶ್ರೀನಿವಾಸಯ್ಯನ ಮಗ ಕೇಶವ ಪೇಟೆಯಲ್ಲಿ ತರಕಾರಿ ವ್ಯಾಪಾರದಲ್ಲಿ ನಿರತನಾಗಿದ್ದ. ಅವನ ದೋಸ್ತಿಗಳಾದ ವೆಂಕಟ, ಪುಟ್ಟು ಎರಡು ಗಂಧದ ಹಾರ ತಕ್ಕೊಂಡು ಹೋಗಿ ಸೀದಾ ಅವನ ಕುತ್ತಿಗೆಗೆ ಹಾಕಿ ಆಲಂಗಿಸಿಕೊಂಡು ಅಭಿನಂದಿಸತೊಡಗಿದರು. ವಿಷಯ ತಿಳಿಯದೆ ಬೆಪ್ಪಾಗಿ ಕಣ್ಣು ಕಣ್ಣು ಬಿಡುತ್ತಾ ನಿಂತ, ಕೇಶವ.

"ಲೋ ಯಾಕೋ ಹಾಗೆ ನೋಡ್ತೀ? ನಮಗ್ಗೊತ್ತಿಲ್ಲಾ ಅಂದ್ಕೊಂಡ್ಯಾ? ಅಪ್ಪಯ್ಯಾ. ಹತ್ ಲಕ್ಷ ತಾಗಿದ್ರೂ ಏನೂ ಗೊತ್ತಿಲ್ದೋನ್ ಹಾಗೆ ನಟಿಸ್ತೀಯಾ! ಲೋ ನಾವೇನ್ ಸಾಲಾ ಕೇಳ್ತೀವೇಂತ ತಿಳಿದ್ಯೇನೋ, ದೊಡ್ಡ ಮನಿಶ್ಯಾ ?" ವೆಂಕಟ ಎಂದ.

"ಅಷ್ಟೇನೋ ಈಗ ನಾವೆಲ್ಲಾ ಯಾವ ಲೆಕ್ಕ? ನಡಿ ಭರ್ಜರಿ ಪಾರ್ಟಿ ಆಗ್ಲಿ."

ಪಾಪ! ಕೇಶವನಿಗೆ ಏನೂ ಅರ್ಥವಾಗಲಿಲ್ಲ. "ಲೋ ಏನ್ರೋ ಇದು ವಿಷಯಾ ಏನು ಹೇಳ್ರೋ" ಅನ್ನುತ್ತಿರುವಾಗ ಎಸ್. ಬ್ಯಾಂಕ್ ಮೇನೇಜರರು ಸೀದಾ ತರಕಾರಿ

ಬುಟ್ಟಿಗೇ ಸ್ಕೂಟರ್ ಹೊಡೆದು ಬ್ರೇಕ್ ಒತ್ತಿದ್ದರು. "ಏನಯ್ಯಾ ಕೇಶವ ನಿನಗೆ ತರಕಾರಿ ವ್ಯಾಪಾರಕ್ಕೆ ಸಾಲಾ ಕೊಡಲಿಕ್ಕೆ ನಾವು, ಇನ್ನ ದುಡ್ಡು ಇಡೋದಿಕ್ಕೆ ಆ ದೊಡ್ಡ ಬ್ಯಾಂಕ್‌ಗೆ ಅಪ್ಪನ್ನ ಕಳಿಸಿದ್ದೀಯಾ?" ಸ್ವಲ್ಪ ಕೋಪ ಬೆರೆತ ದನಿಯಲ್ಲೇ ಕೇಳಿದರು. ಕೇಶವ ಇನ್ನೂ ಬೆಪ್ಪಾದ. "ರಾಯರೆ, ವಿಷಯಾ ಏನೂಂತ ನನಗೆ ಹೇಳಿದ್ರೆ" ಎಂದು ಅದೇ ರಾಗ ಎಳೆದ. "ಅಲ್ಲಯ್ಯಾ ನಿಮ್ಗೆ ಲಾಟ್ರಿ ಹತ್ತಿದ್ರೆ ಗುಟ್ ಯಾಕೆ? ನಾವೆಲ್ಲ ನಿಮ್ಮವರೇ ಅಲ್ವೇ? ಮೂವತ್ತ್ ಲಕ್ಷ ನಾವು ತರ್ಸಿ ಕೊಡ್ತಿರ್ಲಿಲ್ವೆ? ನಮ್ಮಲ್ಲಿ ಇಟ್ರೆ ಬಡ್ಡಿ ದರಾನೂ ಜಾಸ್ತಿ ಅಲ್ವೇ?" ಅಂದ ಮೇನೇಜರು.

"ಯಾರಿಗೆ ತಾಗಿರೋದು ಲಾಟ್ರಿ?"

"ಮತ್ತೂ ತಮಾಷೆ ಮಾಡ್ತೀಯಾ? ನಿನ್ನಪ್ಪ ಅಲ್ಲಿ ಆ ಬ್ಯಾಂಕಿನಲ್ಲಿ ಲಾಟ್ರಿ ಟಿಕೀಟು ಕೊಟ್ಟಿದಾರಲ್ಲ. ಇನ್ನೇನು ಈಗಾಗಲೇ ಅವು, ಕಲೆಕ್ಷನ್‌ಗೆ ಕಳ್ಸಿಯೂ ಆಯ್ತೋ ಏನೋ."

ಈಗ ಕೇಶವನಿಗೆ ಅಲ್ಪಸ್ವಲ್ಪ ಅರ್ಥ ಆಗಿರಬೇಕು. "ಏನು, ನನ್ತಂದೆ ಲಾಟ್ರಿ ಟಿಕೇಟು ತಕ್ಕೊಂಡು ಬ್ಯಾಂಕಿಗೆ ಹೋಗಿದಾರೋ?" ಎಂದ. ಅವನಿಗೆ ಇದೇನೋ ಗೊಂದಲ ತನ್ನ ತಂದೆ ಉಂಟುಮಾಡಿರಬೇಕೆಂದು ಗ್ರಹಿಕೆ ಆಗಿತ್ತು. ಕಾರಣ, ಶ್ರೀನಿವಾಸಯ್ಯನಿಗೆ 'ಗಡಿಬಿಡಿ' ಎಂದು ಅಡ್ಡ ಹೆಸರು ಆದಾಗಲೇ ಇತ್ತು! ಕೂಡಲೇ ಬನೀನಿನ ಮೇಲೆ ಶರ್ಟು ಸಿಕ್ಕಿಸಿ ಸೈಕಲ್ಲಿಗೆ ಹಾರಿ ಬ್ಯಾಂಕಿಗೆ ಧಾವಿಸಿದ ಕೇಶವ.

ಕೇಶವ ಓಡುತ್ತಾ ಮೇನೇಜರರ ರೂಮಿಗೆ ನುಗ್ಗಿದಾಗ ಸುಧಾರಿಸಿಕೊಂಡು ಕುಳಿತುಕೊಳ್ಳಲು ಹೇಳಿದೆ. ನಮ್ಮ ಮ್ಯಾನೇಜರು ಅದೇ ಮಾದಕ ಮಂದಹಾಸದೊಂದಿಗೆ 'ಡೋಂಟ್ ಬಿ ಎಕ್ಸೈಟೆಡ್,' ಅಂತಂದರು. ಕೇಶವನಿಗೆ ನಮ್ಮ ಮಾತು ಕೇಳೋ ವ್ಯವಧಾನ ಇರಲಿಲ್ಲ.

'ಏನು ಇದೆಲ್ಲಾ?' ಎಂದು ತಂದೆಗೆ ಪ್ರಶ್ನಿಸಿದ. "ನೋಡು, ನೀನು ರಿಸಲ್ಟು ನನ್ನ ಕೋಟು ಕಿಸೇಲಿ ಇಟ್ಟಿದ್ಯಲ್ಲಾ, ಹಾಳಾದ್ದು ಲಾಟ್ರಿ ಟಿಕೇಟು ಈವತ್ ಕೈಗೆ ಸಿಕ್ತು. ಫಸ್ಟ್ ನಂಬರೇ ನಮ್ಮ ಟಿಕೇಟಿಂದು—ಅಂದ್ರೆ ಅದು ಬಂಪರ್ ಪ್ರೈಸ್ ಇರ್ಬೇಕಲ್ವೇನೋ?"

ಕೇಶವನ ಮೋರೆ ಒಂದು ಥರಾ ಆಗಿತ್ತು. ಲಾಟ್ರಿ ಟಿಕೇಟು ಮೇನೇಜರರ ಟೇಬಲ್ ಮೇಲೇ ಇತ್ತು. ಇದೇ ಟಿಕೇಟು ನಾನು ರಿಸಲ್ಟ್ ನೋಡಿ ಹೊತ್ತಾಕಿದ್ನಲ್ಲ, ನಿಮ್ಮ ಕಿಸೇಲಿದ್ದದ್ದು. ತಕೊಂಡಿರೊ ಲಾಟ್ರಿ ಟಿಕೀಟುಗಳ ನಂಬರ್ ಲಿಸ್ಟು ಅಷ್ಟೆ. ಎಂದು, "ಸಾರಿ ಸರ್, ನಮ್ಮಪ್ಪನಿಗೆ ತಲೆ ಸರಿಯಿಲ್ಲ. ಏನಾದರೊಂದು ...." ಅಂದಾಗ ಎಲ್ಲರ ತಲೆಗಳ ಮೇಲೆ ತಣ್ಣೀರು ಸುರಿದಂತೆ ಆಗಿತ್ತು.!

---

ಭಾರತೀಯ ಸ್ಟೇಟ್ ಬ್ಯಾಂಕಿನಿಂದ ಪುರೋನಿಧಾನಿತವಾದ ಶ್ರೀ ವಿಶಾಖ ಗ್ರಾಮೀಣ ಬ್ಯಾಂಕು, ದೇಶದಲ್ಲಿನ 66 ಗ್ರಾಮೀಣ ಬ್ಯಾಂಕುಗಳ ಪೈಕಿ, ಠೇವಣಿಯ ಜಮಾವಣೆ ಮತ್ತು ಸಾಲದ ವಸೂಲಿಯಲ್ಲಿ, ಮೊದಲನೆಯ ಸ್ಥಾನದಲ್ಲಿದೆ. 30-7-80 ರಂದು ಠೇವಣಿಗಳು ರೂ. 9.74 ಕೋಟಿ ಮತ್ತು ಸಾಲದ ವಸೂಲಿ 86%. ಅದು ಜೂನ್ 30 ರವರೆಗೆ, ರೂ. 28.91 ಕೋಟಿಗಳಷ್ಟು ಸಾಲವನ್ನು 2,06,179 ಜನವರಿಗೆ. ವಿಶಾಖಪಟ್ಟಣ, ವಿಜಯನಗರ. ಮತ್ತು ಶ್ರೀಕಾಕುಲಂ ಜಿಲ್ಲೆಗಳಲ್ಲಿ ನೀಡಿದೆ. ಅದು 85 ಶಾಖೆಗಳನ್ನು ಹೊಂದಿದೆ. ಅದು 1979ರಲ್ಲಿ 2,61,855 ರೂ ಲಾಭ ಗಳಿಸಿತು. ಅದರ ಹಿಂದಿನ ವರ್ಷ ಅದು 11.26.388 ರಷ್ಟು ರೂ ಲಾಭಗಳಿಸಿತ್ತು.

---

ನ್ಯಾಯಾಲಯದಲ್ಲಿ

# ಚೀಟಿ ವ್ಯವಹಾರ ಮತ್ತು ಬ್ಯಾಂಕು ವಿಲೀನ

---

ಕೆ. ಪಿ. ರಾವ್

**ಬ್ಯಾಂಕ್ ಉದ್ಯಮಕ್ಕೆ ಸಂಬಂಧಪಟ್ಟಂತೆ ಕೋರ್ಟುಗಳು ನೀಡುವ ಕೆಲವು ತೀರ್ಪುಗಳನ್ನು ಪರಿಚಯ ಮಾಡಿಕೊಡುವುದು ಈ ಸ್ಥಿರವಿಭಾಗದ ಉದ್ದೇಶ.**

1980ರ ಜನವರಿಯಿಂದ ಇದುವರೆವಿಗೆ ಮಹತ್ವಪೂರ್ಣ ತೀರ್ಮಾನಗಳು ಯಾವುವೂ ವರದಿಯಾಗಿಲ್ಲ.

ಕೇರಳದಲ್ಲಿ ವ್ಯವಹಾರ ಮಾಡುತ್ತಿದ್ದ ಕೊಟ್ಟಾಯಂ ಓರಿಯಂಟ್ ಬ್ಯಾಂಕ್ ನಡೆಸುತ್ತಿದ್ದ ಚೀಟಿ ವ್ಯವಹಾರ ಸರ್ವೋಚ್ಚ ನ್ಯಾಯಾಲಯದ ವರೆಗೆ ಮುಟ್ಟಿ, ಇತ್ತೀಚೆಗೆ ತೀರ್ಮಾನವಾಗಿರುವ ಪ್ರಕರಣವೊಂದನ್ನು ಇಲ್ಲಿ ಗಮನಿಸ ಬಹುದಾಗಿದೆ.

ಕೊಟ್ಟಾಯಂ ಓರಿಯಂಟ್ ಬ್ಯಾಂಕನ್ನು ಸರಕಾರ ಸ್ಟೇಟ್ ಬ್ಯಾಂಕ್ ಆಫ್ ಟ್ರಾವಂಕೂರ್‌ನೊಡನೆ ವಿಲೀನಗೊಳಿಸಿದಾಗ ಉದ್ಭವಿಸಿದ ಸಮಸ್ಯೆಗಳ ಪೈಕಿ ಇದೂ ಒಂದು. ಕೇವಲ 1,600 ರೂಪಾಯಿಗಳ ಚೀಟಿ ಹಣಕ್ಕಾಗಿ ಗ್ರಾಹಕನೋರ್ವ ಹತ್ತಿರ ಹತ್ತಿರ ಇಪ್ಪತ್ತು ವರ್ಷಗಳ ಕಾಲ ನ್ಯಾಯಾಲಯದ ಮುಂದೆ ಹೆಣಗಾಡಿ "ದೊರೆಯ ತನಕ ದೂರು" ಎಂಬಂತೆ ಕೊಟ್ಟಾಯಂ ಮುನ್ಸೀಫ ನ್ಯಾಯಾಲಯದಿಂದ ನವದೆಹಲಿಯ ಸರ್ವೋಚ್ಚ ನ್ಯಾಯಾಲಯದ ವರೆಗೆ ಹೋಗಬೇಕಾಗಿ ಬಂದ ಪ್ರಸಂಗವಿದು.

ಈ ಪ್ರಕರಣಕ್ಕೆ ಕಾರಣವಾದದ್ದು—ಕೊಟ್ಟಾಯಂ ಓರಿಯಂಟ್ ಬ್ಯಾಂಕು ನಡೆಸುತ್ತಿದ್ದ ಚೀಟಿ ವ್ಯವಹಾರ. ಇದನ್ನು ತಿರುವಾಂಕೂರು ಚೀಟಿ ಅಧಿನಿಯಮದ ಪ್ರಕಾರ ನಡೆಸಲಾಗುತ್ತಿತ್ತು. ಇಪ್ಪತ್ತು ಸಾವಿರ ರೂಪಾಯಿ ಮೌಲ್ಯವುಳ್ಳ ಚೀಟಿಯೊಂದಕ್ಕೆ ಗುಡ್‌ಲಾಸ್ ಪ್ಲಾಂಟೇಷನ್ಸ್ (ಪ್ರೈ.) ಲಿಮಿಟೆಡ್ ಎಂಬ ಕಂಪನಿ ಚಂದಾದಾರನಾಗಿ ದಾಖಲಾಯಿತು. ಈ ಚೀಟಿಗೆ ಓರಿಯಂಟ್ ಬ್ಯಾಂಕು "ಫೋರ್‌ಮನ್" ಆಗಿತ್ತು. ಅಂದರೆ ಪ್ರತಿಯೊಬ್ಬ ಚಂದಾದಾರರೂ ತಲಾ 400 ರೂ.ಗಳ 50 ಮಾಸಿಕ ಕಂತುಗಳಲ್ಲಿ ಇಪ್ಪತ್ತು ಸಾವಿರ ರೂ.ಗಳನ್ನು ತುಂಬಬೇಕಾಗಿತ್ತು. ಚಂದಾದಾರರಿಂದ ಸಂಗ್ರಹವಾದ ಮೊತ್ತವನ್ನು ಪ್ರತಿ ತಿಂಗಳೂ ಹರಾಜಿಗೆ ಇಟ್ಟು, ಹೆಚ್ಚಿಗೆ ಸವಾಲು ಸಲ್ಲಿಸುವವರಿಗೆ ಆ ಹಣವನ್ನು ಕೊಡಲಾಗುತ್ತಿತ್ತು.

ಈ ವ್ಯವಸ್ಥೆಯ ಮೇರೆಗೆ ಗುಡ್‌ಲಾಸ್ ಕಂಪನಿ ಚಂದಾದಾರನಾಗಿ ಸೇರಿ, ಮೊದಲನೆಯ ಕಂತೂ ಸೇರಿದಂತೆ 1960ರ ಡಿಸೆಂಬರ್ 10ನೆಯ ತಾರೀಕಿನವರೆಗೆ ತಲಾ 400 ರೂಪಾಯಿಗಳ ನಾಲ್ಕು ಕಂತುಗಳನ್ನು ಪಾವತಿ ಮಾಡಿತು. ಅಂದರೆ ಒಟ್ಟು ರೂ. 1,600ನ್ನು ಸಂದಾಯ ಮಾಡಿತು. ಅನಂತರ ಜರುಗಿದ ಹರಾಜಿನಲ್ಲಿ ಗುಡ್‌ಲಾಸ್ ಕಂಪನಿ ರೂ. 8,925ನ್ನು ಬಿಟ್ಟು ಕೊಡಲು ಮತ್ತು ಈ ಇಪ್ಪತ್ತು ಸಾವಿರ ರೂ.ಗಳ ಪೈಕಿ ರೂ. 11,075ನ್ನು ಮಾತ್ರ ಸ್ವೀಕರಿಸಲು ಸಿದ್ಧವಿರುವುದಾಗಿ ಭಿಡ ಸವಾಲನ್ನು ಸಲ್ಲಿಸಿ ಜಯಗಳಿಸಿತು. ಅದಾದ ಒಂದು ತಿಂಗಳಲ್ಲಿ, ಅಂದರೆ 1961ರ ಜನವರಿ 10ಕ್ಕೆ ಆ ಚಂದಾದಾರ ಕಂಪನಿಗೆ ಹಣವನ್ನು ಕೊಡಬೇಕಾಗಿತ್ತು. ತೆಗೆದುಕೊಂಡ ಹಣದ ಮರುಪಾವತಿಗಾಗಿ ಖಾತರಿ ಬಗ್ಗೆ ಜಾಮೀನು ಮತ್ತು ಇತರ ಷರತ್ತುಗಳಿಗೆ ಒಳಪಟ್ಟಂತೆ ಹಣವನ್ನು ಕೊಡ

ಬೇಕಾಗಿದ್ದಿತು. ಆ ಹಂತದಲ್ಲಿ, ಕೇಂದ್ರ ಸರಕಾರ ಓರಿಯಂಟ್ ಬ್ಯಾಂಕಿನ ವಹಿವಾಟುಗಳನ್ನು ಸ್ಥಗಿತಗೊಳಿಸುವ (ಮಾರೆ ಟೋರಿಯಂ) ಆಜ್ಞೆಯನ್ನು ಘೋಷಿಸಿತು. ಈ ಆಜ್ಞೆ ಯನ್ನು 1949ರ ಬ್ಯಾಂಕಿಂಗ್ ನಿಬಂಧನ ಅಧಿನಿಯಮದ 45ನೆಯ ವಿಧಿಯ ಪ್ರಕಾರ 1960ರ ಡಿಸೆಂಬರ್ 12ರಂದು ಪ್ರಕಟಿಸಲಾಯಿತು. ಇದರ ಪರಿಣಾಮವಾಗಿ ಓರಿಯಂಟ್ ಬ್ಯಾಂಕಿನ ಎಲ್ಲ ವಹಿವಾಟುಗಳೂ ನಿಂತುಹೋದುವು. ಪ್ರಥಮತಃ ಈ ಆಜ್ಞೆ 1961ರ ಮಾರ್ಚ್ 18ರ ವರೆಗೆ ಮಾತ್ರ ಜಾರಿಯಲ್ಲಿದ್ದು, ಅದನ್ನು 1961 ರ ಜೂನ್ 16ರ ವರೆಗೆ ವಿಸ್ತರಿಸಲಾಯಿತು. ವಹಿವಾಟುಗಳನ್ನು ನಿಲ್ಲಿಸಿದುದರಿಂದ ಚೀಟಿ ವ್ಯವಹಾರವೂ ನಿಂತುಹೋಯಿತು. ಇದರಿಂದಾಗಿ ತಿರುವಾಂಕೂರು ಚೀಟಿ ಅಧಿನಿಯಮದ 39(2) ಮತ್ತು 41ನೆಯ ವಿಧಿಗಳ ಪ್ರಕಾರ ಚೀಟಿ ಹಣವನ್ನು ಅದುವರೆವಿಗೂ ಪಡೆಯದೆ ಇದ್ದ ಚಂದಾದಾರರುಗಳಿಗೆಲ್ಲಾ ಹಣವನ್ನು ಹಿಂದಿರುಗಿಸುವ ಹೊಣೆಗಾರಿಕೆ ಓರಿಯಂಟ್ ಬ್ಯಾಂಕ್‌ನ ಮೇಲೆ ಬಿದ್ದಿತು.

ಈ ಸಮಯದಲ್ಲಿಯೇ ಓರಿಯಂಟ್ ಬ್ಯಾಂಕನ್ನು ಸ್ಟೇಟ್ ಬ್ಯಾಂಕ್ ಆಫ್ ಟ್ರಾವಂಕೂರ್‌ನೊಡನೆ ವಿಲೀನಗೊಳಿಸುವ ಯೋಜನೆಯೊಂದನ್ನು ಸರಕಾರ ಸಿದ್ಧಗೊಳಿಸಿತು. ಇದರ ಪ್ರಕಾರ ಓರಿಯಂಟ್ ಬ್ಯಾಂಕಿನ ಎಲ್ಲ ಆಸ್ತಿ, ಲೇಣೆ-ದೇಣೆ ಗಳೂ—ಸ್ಟೇಟ್ ಬ್ಯಾಂಕ್ ಆಫ್ ಟ್ರಾವಂಕೂರಿಗೆ ವರ್ಗಾ ವಣೆಯಾದುವು. ತದನಂತರ ಕೇಂದ್ರ ಸರಕಾರ ಮತ್ತೊಂದು ಆಜ್ಞೆಯನ್ನು ಹೊರಡಿಸಿ ಚೀಟಿ ವ್ಯವಹಾರವನ್ನು ಸ್ಥಗಿತ ಗೊಳಿಸಿದ್ದ ಆಜ್ಞೆಯನ್ನು ಅನೂರ್ಜಿತಗೊಳಿಸಿತು.

ಗುಡ್‌ಲಾಸ್ ಕಂಪನಿ ತನ್ನ ಚಂದಾ ಹಣವಾದ ರೂ. 1,600ನ ಪಾವತಿಗಾಗಿ ಕೊಟ್ಟಾಯಂ ಮುನ್ಸೀಫ ಕೋರ್ಟಿ ನಲ್ಲಿ 1965ರ ಡಿಸೆಂಬರ್ 6ರಂದು ದಾವಾ ಹೂಡಿತು. ಆ ದಾವೆಯನ್ನು ವಿರೋಧಿಸಿದ ಸ್ಟೇಟ್ ಬ್ಯಾಂಕ್ ಆಫ್ ಟ್ರಾವಂಕೂರ್, ಓರಿಯಂಟ್ ಬ್ಯಾಂಕು ನಡೆಸುತ್ತಿದ್ದ ಚೀಟಿ ವ್ಯವಹಾರವನ್ನು ಸ್ಥಗಿತಗೊಳಿಸಿದ್ದನ್ನು ಕೇಂದ್ರ ಸರಕಾರ ರದ್ದು ಮಾಡಿರುವುದರಿಂದ ತಾನೇ ಚೀಟಿ ವ್ಯವಹಾರವನ್ನು ಮುಂದುವರೆಸಲು ಅವಕಾಶವುಂಟಾಗಿದೆಯೆಂದೂ ಚಂದಾ ಹಣವನ್ನು ವಾಪಸು ಮಾಡಬೇಕಾಗಿಲ್ಲ ಎಂದೂ ವಾದಿಸಿತು.

ಈ ಬಗ್ಗೆ ಕೇಂದ್ರ ಸರಕಾರ ಮಾಡಿರುವ ಆಜ್ಞೆ ಸಂವಿಧಾನ ಹಾಗೂ ಬ್ಯಾಂಕಿಂಗ್ ನಿಬಂಧನ ಅಧಿನಿಯಮಕ್ಕೆ ಬಾಹಿರ ವಾಗಿದೆಯೆಂದು ಚಂದಾದಾರ ಕಂಪೆನಿ ಆಕ್ಷೇಪಿಸಿದ್ದರಿಂದ ಮೊಕದ್ದಮೆ ಕೇರಳ ಉಚ್ಚ ನ್ಯಾಯಾಲಯದ ಮುಂದೆ ಹೋಯಿತು.

ಅಲ್ಲಿ ನ್ಯಾಯಾಧೀಶರೊಬ್ಬರು ತೀರ್ಪನ್ನು ನೀಡಿ, ಪ್ರತಿ ವಾದಿ ಬ್ಯಾಂಕಿನ ಆಕ್ಷೇಪಣೆಯನ್ನು ಎತ್ತಿ ಹಿಡಿದರು; ಹಾಗೂ ಚಂದಾದಾರ ಕಂಪನಿಯ ದಾವೆಯನ್ನು ವಜಾ ಮಾಡಿದರು.

ಈ ತೀರ್ಮಾನದ ವಿರುದ್ಧ ವಾದಿ-ಚಂದಾದಾರ ಕಂಪನಿ ಅದೇ ನ್ಯಾಯಾಲಯದಲ್ಲಿ ದ್ವಿಸದಸ್ಯ ನ್ಯಾಯಪೀಠದ ಮುಂದೆ ಅಪೀಲನ್ನು ಸಲ್ಲಿಸಿತು. ಅಪೀಲಿನಲ್ಲಿ ದ್ವಿಸದಸ್ಯ ನ್ಯಾಯಪೀಠ ತೀರ್ಪನ್ನಿತ್ತು, ಕೇಂದ್ರ ಸರಕಾರದ ಆಜ್ಞೆ ಕಾನೂನಿಗೆ ಅನುಗುಣವಾಗಿಲ್ಲ, ಚಂದಾದಾರರ ಹಣವನ್ನು ವಾಪಸು ಮಾಡತಕ್ಕದ್ದು ಎಂದು ಅಭಿಪ್ರಾಯಪಟ್ಟು ಚಂದಾ ದಾರ ಕಂಪನಿಯ ಪರವಾಗಿ ತೀರ್ಮಾನಿಸಿತು.

ಈ ತೀರ್ಮಾನದ ವಿರುದ್ಧ ಸ್ಟೇಟ್ ಬ್ಯಾಂಕ್ ಆಫ್ ಟ್ರಾವಂಕೂರ್ ಸರ್ವೋಚ್ಚ ನ್ಯಾಯಾಲಯಕ್ಕೆ ಹೋಯಿತು. ಕೇಂದ್ರ ಸರಕಾರದ ಆಜ್ಞೆಯ ಕಾನೂನು ಬದ್ಧತೆಯ ಬಗ್ಗೆ ಸರ್ವೋಚ್ಚ ನ್ಯಾಯಾಲಯದ ತ್ರಿಸದಸ್ಯ ನ್ಯಾಯಪೀಠ ದೀರ್ಘ ವಾದ ತೀರ್ಪನ್ನು ನೀಡಿದೆ. ಕೇಂದ್ರ ಸರಕಾರದ ಆಜ್ಞೆ ಕಾನೂ ನಿಗೆ ಅನುಸಾರವಾಗಿದೆ. ಚಂದಾದಾರರು ಚಂದಾ ಹಣದ ವಾಪಸಾತಿಗಾಗಿ ಸಲ್ಲಿಸುವ ದಾವಾ ನಿಲ್ಲತಕ್ಕದ್ದಲ್ಲ ಎಂದು ಸರ್ವೋಚ್ಚ ನ್ಯಾಯಾಲಯದ ಅಭಿಪ್ರಾಯವಾಗಿದೆ. ಪರಿ ಣಾಮವಾಗಿ ಚಂದಾದಾರರ ಕಂಪನಿಯ ದಾವಾವನ್ನು ನ್ಯಾಯಾಲಯ ವಜಾ ಮಾಡಿತು. ನ್ಯಾಯಾಧೀಶರುಗಳಾದ ಸರ್ವಶ್ರೀ ಎನ್. ಎಲ್. ಉಂಟವಾಲಿಯ, ಪಿ. ಎನ್. ಶಿಂಘಾಲ್, ಮತ್ತು ಎ. ಡಿ. ಕೋಶಾಲ್ ಇವರುಗಳ ತೀರ್ಪು 1979ರ ನವೆಂಬರ್ 7ರಂದು ಹೊರಬಿತ್ತು.

ಅಂದರೆ 1960ನೆಯ ವರ್ಷ ಚಂದಾದಾರ ಕಂಪನಿ ಪಾವತಿ ಮಾಡಿದ ರೂ. 1,600ರ ಚಂದಾ ವಾಪಸಾತಿಗೆ ಮಾರ್ಗವಿಲ್ಲವೆಂದು ಅಂತಿಮ ತೀರ್ಮಾನವಾಗಲು ನ್ಯಾಯಾ ಲಯಕ್ಕೆ 19 ವರ್ಷಗಳು ಬೇಕಾದುವು. ಇನ್ನು ಆ ಹಣವನ್ನು ಪಡೆಯಲು ಸದರಿ ಚಂದಾದಾರ ಏನು ಮಾಡಬೇಕೆಂಬ ವಿಚಾರ ಇಲ್ಲಿ ಅಪ್ರಕೃತ.

ಈ ರೀತಿಯಲ್ಲಿ ತನ್ನದೇನೂ ತಪ್ಪಿಲ್ಲದ ಓರ್ವ ಮುಗ್ಧ ಚಂದಾದಾರ ಕಾನೂನಿನ ಆಶ್ರಯವನ್ನು ಗಳಿಸಲು ಹೋಗಿ ಅದರ ಜಾಲದಲ್ಲೇ ಸಿಕ್ಕಿ ಹಾಕಿಕೊಂಡು ಇಪ್ಪತ್ತು ವರ್ಷಗಳ ಕಾಲ ಪ್ರಯೋಜನವಿಲ್ಲದೆ ತೊಳಲಾಡಿದ್ದಕ್ಕೆ ಇದು ಒಂದು ನಿದರ್ಶನವಾಗಿದೆ.

ಬ್ಯಾಂಕಿಂಗಿನ ಇತಿಹಾಸ—೧

# ಆರಂಭದ ಕುರುಹುಗಳು

ಎಚ್ಚೆಸ್ಕೆ

**ಪ್ರಾಚೀನ ಕಾಲದಲ್ಲಿ ಬೇರು ಬಿಟ್ಟು, ಮಧ್ಯ ಯುಗದಲ್ಲಿ ಜೀವಲಕ್ಷಣಗಳನ್ನು ಗಳಿಸಿ, ಆಧುನಿಕ ಯುಗದಲ್ಲಿ ವೈವಿಧ್ಯಮಯವಾಗಿ ಬೆಳೆದಿರುವ ಬ್ಯಾಂಕಿಂಗಿನ ಕಥೆ. ಧಾರಾವಾಹಿಯಾಗಿ ಪ್ರಕಟವಾಗುವ ಲೇಖನದ ಮೊದಲ ಕಂತು ಇದು.**

ಬ್ಯಾಂಕ್ ಎಂದರೆ ಏನು ಎಂಬುದನ್ನು ಕೆಲವೇ ಮಾತುಗಳಲ್ಲಿ ವಿವರಿಸುವುದು ಸುಲಭವಲ್ಲ. ಬ್ಯಾಂಕ್ ಎಂದೊಡನೆಯೇ ಹಲವಾರು ಮಂದಿ ಹಣ ಕೊಡುತ್ತಿರುವ, ಪಡೆಯುತ್ತಿರುವ, ಮಿರುಮಿರುಗುವ ಮರದ ಕಟಕಟೆಗಳಾಚೀಚೆ ಜನರು ಕಲೆತು ಹಣಕ್ಕೆ ಸಂಬಂಧಿಸಿದ ಮಾತುಕತೆ ನಡೆಸುತ್ತಿರುವ, ಪತ್ರಗಳಿಗೆ ಸಹಿ ಹಾಕುತ್ತಿರುವ, ಅವನ್ನು ಕೊಡುತ್ತಿರುವ ಅಥವಾ ತೆಗೆದುಕೊಳ್ಳುತ್ತಿರುವ ಚಿತ್ರ ನಮ್ಮ ಕಣ್ಣ ಮುಂದೆ ಬಂದು ನಿಲ್ಲುತ್ತದೆ. ಬ್ಯಾಂಕುಗಳು ಈ ಯುಗದ ಅತ್ಯಂತ ಪ್ರಮುಖ ಸಂಸ್ಥೆಗಳು. ಕೈಗಾರಿಕೆ, ವಾಣಿಜ್ಯ, ಆಡಳಿತ, ಅಭಿವೃದ್ಧಿ, ಎಲ್ಲಕ್ಕೂ ಮೂಲಭೂತವಾಗಿರುವ ಹಣದ ವ್ಯವಹಾರವೇ ಬ್ಯಾಂಕುಗಳ ಮುಖ್ಯ ಚಟುವಟಿಕೆ. ಅವು ವಾಸ್ತವವಾಗಿ ಹಣದ ಅಂಗಡಿಗಳು. ಹಣವೇ ಅವುಗಳ ವ್ಯಾಪಾರ ಸರಕು. 'ಉಳ್ಳ'ವರಿಂದ ಹಣವನ್ನು ಪಡೆದುಕೊಂಡು ಅವರಿಗೆ ಋಣಿಗಳಾಗುವುದು, 'ಇಲ್ಲ'ದವರಿಗೆ ಅದನ್ನು ಕೊಟ್ಟು ಅವರನ್ನು ಋಣಿಗಳನ್ನಾಗಿ ಮಾಡಿಕೊಳ್ಳುವುದು, ತಾವು ಋಣಿಗಳಾಗಿ ಕೊಟ್ಟ ಬಡ್ಡಿಯ ಹಣವನ್ನೂ ವ್ಯವಹಾರದ ಖರ್ಚುಗಳನ್ನೂ ಋಣಿಗಳಿಂದ ಪಡೆದ ಬಡ್ಡಿಯ ಹಣದಿಂದ ಕಳೆದು ಉಳಿದದ್ದನ್ನು ಲಾಭವೆಂದು ಪರಿಗಣಿಸುವುದು—ಇವು ಸ್ಥೂಲವಾಗಿ ಬ್ಯಾಂಕುಗಳ ಮುಖ್ಯ ವ್ಯವಹಾರಗಳು.

## ಆಧುನಿಕ ಬ್ಯಾಂಕಿನ ಸ್ವರೂಪ

ಇತರ ವ್ಯಾಪಾರಿಗಳು ತಮ್ಮ ಬಂಡವಾಳದ ಹಣದಿಂದ ಸರಕನ್ನು ಕೊಂಡು, ಅದನ್ನು ಮಾರಾಟ ಮಾಡಿ ಮತ್ತೆ ಹಣವಾಗಿ ಪರಿವರ್ತಿಸಿಕೊಳ್ಳುತ್ತಾರೆ. ಇವರಿಗೆ ಹಣವೆಂಬುದು ವ್ಯವಹಾರದ ಮಾಧ್ಯಮ, ಸರಕು ಸೇವೆಗಳ ಮೌಲ್ಯವನ್ನಳೆಯುವ ಸಾಧನ, ಕೊಡಬೇಕಾದ ಅಥವಾ ಬರಬೇಕಾದ ಬಾಕಿಯನ್ನು ನಮೂದಿಸುವ ಉಪಾಯ. ಇವರು ಮೌಲ್ಯವನ್ನು ಶೇಖರಿಸಿ ಇಡುವುದು ಹಣದ ರೂಪದಲ್ಲಿ. ಆದರೆ ಬ್ಯಾಂಕು ಹಣದಲ್ಲೇ ನೇರವಾಗಿ ವ್ಯವಹರಿಸುತ್ತದೆ. ಇತರ ವ್ಯಾಪಾರಿಗಳ ವ್ಯವಹಾರ ಸಾಗಲು ಅವರ ಸ್ವಂತ ಬಂಡವಾಳವೇ ಪ್ರಧಾನ ಸಾಧನವಾದರೆ, ಆಧುನಿಕ ಬ್ಯಾಂಕಿನ ಸ್ವಂತ ಬಂಡವಾಳ ಅಲ್ಪ. 'ಉಳ್ಳ'ವರಿಂದ ಅದು ಪಡೆಯುವ ಹಣ ಅಗಾಧ. ಈ ಹಣ ಹಲವರಿಂದ ಠೇವಣಿಗಳ ರೂಪದಲ್ಲಿ ಅಲ್ಪಾಂಶಗಳಲ್ಲಿ ಹರಿದುಬಂದು ಬ್ಯಾಂಕಿನಲ್ಲಿ ಒಟ್ಟೈಸುತ್ತದೆ. 'ಇಲ್ಲ'ದವರಿಗೆ, ಹಣ ಬೇಕಾದವರಿಗೆ, ಈ ಠೇವಣಿಗಳ ಹಣವನ್ನು ಬ್ಯಾಂಕು ಎರವಲಾಗಿ ಕೊಡುತ್ತದೆ. ಆದ್ದರಿಂದ ಠೇವಣಿಗಳ ರೂಪದಲ್ಲಿ ಹಣದ ಸಂಗ್ರಹಣೆ, ಸಾಲಗಳ ರೂಪದಲ್ಲಿ ಅದರ ವಿತರಣೆ—ಇವು ಬ್ಯಾಂಕಿನ ಮೂಲಭೂತ ಕಾರ್ಯಭಾರಗಳೆನ್ನಬಹುದು.

ಬ್ಯಾಂಕು ಎಂಥವರಿಂದ ಹಣವನ್ನು ಠೇವಣಿಗಳ ರೂಪದಲ್ಲಿ ಸಂಗ್ರಹಿಸುತ್ತದೆ, ಎಂಥವರಿಗೆ ಇದನ್ನು ಸಾಲವಾಗಿ—ಉದರಿಯಾಗಿ—ವಿತರಿಸುತ್ತದೆ ಎಂಬುದು ಒಂದು ಸಮುದಾಯದ ದೃಷ್ಟಿಯಿಂದ ವಿಶೇಷ ಪ್ರಾಮುಖ್ಯ ಗಳಿಸುತ್ತದೆ. ಬ್ಯಾಂಕಿಗೂ ಉಳಿತಾಯಕ್ಕೂ ನಿಕಟ ಸಂಬಂಧ ಇರುವುದಾದರೂ, ಅದು ಉಳಿತಾಯವನ್ನು ಬಹಳವಾಗಿ ಉತ್ತೇಜಿಸುವುದಾದರೂ, ಅದಕ್ಕೆ ಉಳಿತಾಯವೇ ಮುಖ್ಯವಲ್ಲ. ಬ್ಯಾಂಕಿಗೂ ಉದರಿಗೂ ಬಲು ಹತ್ತಿರದ ಸಂಬಂಧವೆಂಬುದು ನಿಜ. ಉದರಿಯೇ ಬ್ಯಾಂಕಿನ ಪ್ರಮುಖ ಆದಾಯ ಮೂಲ. ಆದರೂ ಅದು ಉದರಿಯನ್ನು-ಸಾಲವನ್ನು-ಮುಂಗಡವನ್ನು-ಪತ್ತನ್ನು-ಎಂಥವರಲ್ಲಿ ಹಂಚುತ್ತದೆ ಎಂಬುದನ್ನೂ ಕಡೆಗಣಿಸುವಂತಿಲ್ಲ. ಬ್ಯಾಂಕು ನೀಡುವ ಉದರಿಯ ವಿತರಣೆಯಾಗುವುದು ಸಾಮಾನ್ಯವಾಗಿ ಆರ್ಥಿಕತೆಯ ಅಭ್ಯು

ದಯುಕ್ಕಾಗಿ, ಉತ್ಪಾದಕ ಕಾರ್ಯಗಳಿಗಾಗಿ. ಈ ಕಾರಣ ದಿಂದಾಗಿ ಬ್ಯಾಂಕಿಂಗ್ ವ್ಯವಹಾರಕ್ಕೆ ಸಾಮಾಜಿಕವಾಗಿ ಪ್ರಾಮುಖ್ಯ ಪ್ರಾಪ್ತವಾಗಬೇಕಾಗುತ್ತದೆ.

ಹಣವನ್ನು ಸಂಗ್ರಹಿಸುವ, ವಿತರಿಸುವ, ಋಣವನ್ನು ಪಡೆದು ಅದನ್ನು ಇತರರಿಗೆ ನೀಡುವ ಬ್ಯಾಂಕು ಆಧುನಿಕ ಪ್ರಪಂಚದಲ್ಲಿ ವಿಶ್ವರೂಪಸದೃಶವಾದ ರೂಪವನ್ನೂ ಆಕಾರ ವನ್ನೂ ತಳೆದಿರುವುದಕ್ಕೆ ಕಾರಣವಾದ ಇನ್ನೊಂದು ಅಂಶ ವನ್ನು ಇಲ್ಲಿ ಗಮನಿಸಬೇಕು. ಆಧುನಿಕ ಬ್ಯಾಂಕಿಂಗ್ ವ್ಯವಹಾರ ಮೇಲೆ ಕಾಣಿಸುವಷ್ಟು ಸರಳವೇನೂ ಅಲ್ಲ. ಸ್ವಂತ ಬಂಡವಾಳದ ಹಣಕ್ಕಿಂತ ಹಲವು ಮಡಿ ಅಧಿಕವಾಗಿ ಹಲವರಿಂದ ಸಂಗ್ರಹಿಸಿದ ಹಣವನ್ನು ಅದರ ಅಗತ್ಯ ವಿರುವವರಲ್ಲಿ ವಿತರಣೆ ಮಾಡುವ ಪ್ರಕ್ರಿಯೆಯಲ್ಲಿ ಬ್ಯಾಂಕು ವಾಸ್ತವವಾಗಿ ಹಣದ ಸೃಷ್ಟಿಕಾರ್ಯವನ್ನೂ ಮಾಡುತ್ತದೆ. ಬ್ಯಾಂಕ್ ವ್ಯವಹಾರದ ಅಂತರಂಗವನ್ನು ಹೊಕ್ಕು ನೋಡಿ ದವರಿಗೆ ಈ ಅದ್ಭುತವ್ಯಾಪಾರದ ಅರಿವಾಗುತ್ತದೆ. ದೇಶದ ಕೇಂದ್ರೀಯ ಬ್ಯಾಂಕು ನೋಟುಗಳನ್ನು ಅಚ್ಚು ಮಾಡಿ ಚಲಾವಣೆಗೆ ನೀಡುವುದು ನೇರವಾದ ಹಣಸೃಷ್ಟಿ. ಆದರೆ ಇತರ ಬ್ಯಾಂಕುಗಳಿಗೆ ಈ ಅಧಿಕಾರ ಇರುವುದಿಲ್ಲ. ಅವು ಪರೋಕ್ಷವಾಗಿ ಹಣವನ್ನು ಸೃಷ್ಟಿ ಮಾಡುತ್ತವೆ. ಅವು ಪಡೆಯುವ ಠೇವಣಿಗಳ, ಹಾಗೂ ಅವು ತಂದಿರುವ ಬಂಡವಾಳದ ಒಟ್ಟು ಹಣಕ್ಕಿಂತ ಹಲವು ಮಡಿ ಅಧಿಕವಾಗಿ ಅವು ಉದರಿ ನೀಡುತ್ತವೆ. ಬ್ಯಾಂಕಿನಿಂದ ಸಾಲ ಪಡೆದವ ರೆಲ್ಲರೂ ಆ ಹಣವನ್ನು ಕೂಡಲೇ ಪಡೆದುಕೊಂಡು ಹೋಗಿ ಬಿಡುವುದಿಲ್ಲ. ಬಹುತೇಕ ಸಂದರ್ಭಗಳಲ್ಲಿ ಬ್ಯಾಂಕು ಮಾಡುವುದೆಂದರೆ, ಋಣಿಯ ಖಾತೆಗೆ ಆ ಹಣವನ್ನು ದಾಖಲಿಸುತ್ತದೆ. ತಮಗೆ ಬೇಕೆನಿಸಿದಾಗ ಆ ಹಣವನ್ನು ಚೆಕ್ ಮೂಲಕ ತೆಗೆದುಕೊಳ್ಳಬಹುದು, ಅಥವಾ ಯಾರಿ ಗಾದರೂ ಅದನ್ನು ಪಾವತಿ ಮಾಡಬಹುದು ಎಂಬ ಭರವಸೆ ಗ್ರಾಹಕನಿಗೆ ಇರುವುದರಿಂದ ಅವನು ಪಡೆದ ಸಾಲದ ಹಣ ವನ್ನು ಬ್ಯಾಂಕಿನಲ್ಲೇ ಬಿಡುತ್ತಾನೆ. ಬ್ಯಾಂಕು ಅವನ ದೃಷ್ಟಿ ಯಲ್ಲಿ ಒಂದು ಬೃಹತ್ ತಿಜೋರಿ. ಅವನು ಮಾಡುವ ಹಣವಹಿವಾಟುಗಳನ್ನೆಲ್ಲ ದಾಖಲಿಸಿಕೊಳ್ಳುವ ಕೆಲಸವನ್ನು ಕೂಡ ಈ ತಿಜೋರಿ ಮಾಡುತ್ತದೆ. ಗ್ರಾಹಕರು ತಮ್ಮಲ್ಲಿ ಇಟ್ಟಿರುವ ಈ ಬಗೆಯ ಭರವಸೆಯಿಂದಾಗಿಯೇ ಬ್ಯಾಂಕು ಗಳು ಇಂದು ತಮಗೆ ಠೇವಣಾತಿಯಾಗಿ ನಗದಿನ ರೂಪದಲ್ಲಿ ಬರುವ ಹಣಕ್ಕಿಂತ ಹಲವು ಮಡಿ ಅಧಿಕವಾಗಿ ಉದರಿ ನೀಡುವುದು ಸಾಧ್ಯವಾಗಿದೆ. ಎಂದರೆ ಅಷ್ಟರಮಟ್ಟಿಗೆ ಬ್ಯಾಂಕುಗಳು ಹಣವನ್ನು ಸೃಷ್ಟಿಮಾಡಿದಂತೆಯೇ ಆಗು ತ್ತದೆ. ಬ್ಯಾಂಕುಗಳಿಗೆ ಹಣಸೃಷ್ಟಿಯ ಅಗಾಧ ಸಾಮರ್ಥ್ಯ ಇರುವುದರಿಂದಲೇ ಸಾಮಾಜಿಕವಾಗಿ ಇಂದು ಅವಕ್ಕೆ ವಿಶೇಷ ಪ್ರಾಮುಖ್ಯ ಪ್ರಾಪ್ತವಾಗಿದೆ; ಅವನ್ನು ಸಮಾಜದ ಹಿತಕ್ಕೆ ಅನುಗುಣವಾಗಿ ನಿಯಂತ್ರಣದಲ್ಲಿಡುವ ಆವಶ್ಯಕತೆಯೂ ಉದ್ಭವಿಸಿದೆ.

## ಆಧುನಿಕ ಬ್ಯಾಂಕಿನ ಪೂರ್ವಜರು

ಈ ಮಾತು ಹೇಗಾದರೂ ಇರಲಿ. ಆಧುನಿಕ ಬ್ಯಾಂಕು ಗಳಿಗೂ ಹಣವನ್ನು ಸಾಲವಾಗಿ ಕೊಟ್ಟು ಬಡ್ಡಿ ಸಂಪಾ ದಿಸುವ ಲೇವಾದೇವಿಗಾರನಿಗೂ ಬಹಳ ವ್ಯತ್ಯಾಸಗಳಿವೆ. ಆಧುನಿಕ ಬ್ಯಾಂಕುಗಳು ಹಳೆಯ ಕಾಲದ ಲೇವಾದೇವಿ ಗಾರನಿಂದ ಬಹು ಮುಂದೆ ನಡೆದುಬಂದಿವೆ. ಬ್ಯಾಂಕು ಗಳ ಇತಿಹಾಸವನ್ನು ಕುರಿತು ಹೇಳುವಾಗ ಅದನ್ನು ಅತ್ಯಂತ ಪುರಾತನಕಾಲಕ್ಕೆ ತೆಗೆದುಕೊಂಡು ಹೋಗುವುದು ವಾಡಿಕೆ ಯಾದರೂ, ಇಂದು ನಾವು ಕಾಣುತ್ತಿರುವಂಥ ಬ್ಯಾಂಕಿಂಗು ಬಹುತೇಕ ಹತ್ತೊಂಬತ್ತನೆಯ ಶತಮಾನದ ಕೂಸು ಎಂಬು ದನ್ನು ಮರೆಯಬಾರದು. ಆಧುನಿಕ ಬ್ಯಾಂಕಿಂಗಿನ ವ್ಯವ ಹಾರದ ಒಂದೊಂದು ಅಂಶವೂ ಅಣುಸ್ವರೂಪದಲ್ಲಿ ಹಿಂದಿನ ಕಾಲದಲ್ಲಿ ಇದ್ದದ್ದನ್ನು ಎತ್ತಿ ತೋರಿಸಬಹುದಾಗಲಿ, ಅದು ಇಂದಿನ ರೂಪ ತಳೆದದ್ದು ಈಚೆಗೆ ಮಾತ್ರವೇ ಎಂಬುದು ನಿರ್ವಿವಾದ. ಹಣವನ್ನು ಸಾಲವಾಗಿ ನೀಡುವುದು ಆಧುನಿಕ ಬ್ಯಾಂಕಿನ ಒಂದು ಪ್ರಮುಖ ಕಲಾಪವಾದ್ದರಿಂದ ಪ್ರಾಚೀನ ಲೇವಾದೇವಿಗಾರನನ್ನು ಆಧುನಿಕ ಬ್ಯಾಂಕಿನ ಒಬ್ಬ ಮುತ್ತಜ್ಜ ಎಂದು ಹೇಳುವುದುಂಟು. ಮಧ್ಯಯುಗದ ಬೃಹದ್ ವರ್ತಕ ಇಂದಿನ ಬ್ಯಾಂಕುಗಳಂತೆಯೇ ಅಂತರಾಷ್ಟ್ರೀಯ ಖ್ಯಾತಿ ಪಡೆದಿದ್ದುದರಿಂದ ಅವನನ್ನೂ ಈ ವಂಶದ ಒಬ್ಬ ಹಿರೀಕ ನೆಂದು ಹೇಳುವುದು ರೂಢಿಯಾಗಿದೆ. ಇಂಗ್ಲೆಂಡಿನ ಹಳೆಯ ಕಾಲದ ಅಕ್ಕಸಾಲಿಗನೇ ಆಧುನಿಕ ಠೇವಣಿ ಹಾಗೂ ಚೆಕ್ಕು ಪದ್ಧತಿಗಳ ಪ್ರವರ್ತಕನೆಂದು ಪರಿಗಣಿಸಲಾಗಿರು ವುದರಿಂದ ಅವನಿಗೂ ಆಧುನಿಕ ಬ್ಯಾಂಕಿಂಗಿನ ವಂಶವೃಕ್ಷ ದಲ್ಲಿ ಒಂದು ಉನ್ನತ ಸ್ಥಾನವಿದೆಯೆನ್ನಲಾಗಿದೆ. ಈ ಬಗೆಯಾಗೆಲ್ಲ ವಿಚಾರಲಹರಿಯನ್ನು ಹರಿಯಬಿಡುವುದು ವ್ಯರ್ಥಾಲಾಪವೇನೂ ಆಗಲಾರದಾದರೂ, ಆಧುನಿಕ ಬ್ಯಾಂಕಿಂಗು ಆಧುನಿಕ ಬ್ಯಾಂಕಿಂಗೇ. ಅದಕ್ಕೆ ಅದೇ ಸಾಟಿ.

## ಪ್ರಾಚೀನ ಕಾಲದಲ್ಲಿ

ಹಣಾಧಾರಿತವಾದ ಆಧುನಿಕ ಅರ್ಥ ವ್ಯವಸ್ಥೆಯಲ್ಲಿ ಬ್ಯಾಂಕಿಂಗ್ ವಿಕಾಸ ಹೊಂದಿದೆಯೆಂಬುದಂತೂ ನಿಜ. ಹಣವಿಲ್ಲದ ಕಾಲದಲ್ಲಿ, ಅದಿಲ್ಲದಂಥ ವ್ಯವಸ್ಥೆಯಲ್ಲಿ ಬ್ಯಾಂಕು ಹೊಮ್ಮಿರಲಾರದೆಂಬುದು ಕೂಡ ಸ್ಪಷ್ಟ. ಹಣ ಇದ್ದೂ ಅದು ಪ್ರಧಾನವಾಗಿರದಿದ್ದಾಗ ಬ್ಯಾಂಕಿಂಗ್ ಎಂದು ಹೆಸರಿಸ ಬಹುದಾದ ವ್ಯವಹಾರ ನಡೆದಿರಲಾರದು. ಆಧುನಿಕ ಬ್ಯಾಂಕಿಂಗ್ ಮುಖ್ಯವಾಗಿ ಪಾಶ್ಚಾತ್ಯ ಅರ್ಥವ್ಯವಸ್ಥೆಯ ಕೈಗೂಸು; ಅಂತೆಯೇ ಅದು ಆ ವ್ಯವಸ್ಥೆಯ ನಿರ್ಮಾತೃ ಕೂಡ—ಎಂಬುದೂ ನಿಸ್ಸಂದೇಹವೇ. ಪಾಶ್ಚಾತ್ಯ ಅರ್ಥ ಪದ್ಧತಿಯನ್ನು ಅನುಕರಿಸುತ್ತ ಬಂದಿರುವ ಆ ಇತರ ದೇಶಗಳಿಗೂ ಇಂದು ಬ್ಯಾಂಕಿಂಗ್ ವ್ಯವಸ್ಥೆ ಸಹಜವಾಗಿಯೇ ಹರಿದುಬಂದಿದೆ. ಅಲ್ಲಲ್ಲಿಯ ವಿಶಿಷ್ಟ ಪರಿಸ್ಥಿತಿ ಹಾಗೂ

ಆವಶ್ಯಕತೆಗಳಿಗೆ ಅನುಗುಣವಾಗಿ ಅದು ವಿಕಾಸ ಹೊಂದಿದೆ, ಹೊಂದುತ್ತಿದೆ. ಆದರೆ ಮೂಲಭೂತವಾಗಿ ಅದು ತನ್ನ ಪಾಶ್ಚಾತ್ಯ ಲಕ್ಷಣಗಳನ್ನು ಬಿಟ್ಟುಕೊಟ್ಟಿಲ್ಲ.

ಹದಿಮೂರನೆಯ ಶತಮಾನಕ್ಕಿಂತ ಹಿಂದೆ ನಡೆಯುತ್ತಿದ್ದ, ನಾವು ಬ್ಯಾಂಕಿಂಗ್ ಎಂದು ಕರೆಯಬಹುದಾದ, ಕಲಾಪಗಳ ಬಗ್ಗೆ ಹೆಚ್ಚಿನ ದಾಖಲೆಗಳೇನೂ ನಮಗೆ ಸಿಗಲಾರವೆಂಬುದು ಇತಿಹಾಸಕಾರರ ಅಭಿಪ್ರಾಯ. ಇಂದಿನ ವಿವಿಧ ಬಗೆಯ ಬ್ಯಾಂಕಿಂಗ್ ಕಲಾಪಗಳು ಅಂದು ನಡೆಯುತ್ತಿರಲಿಲ್ಲ. ಸಾಲ ನೀಡುತ್ತಿದ್ದುದಕ್ಕೂ, ಠೇವಣಿಗಳನ್ನು ಸ್ವೀಕರಿಸುತ್ತಿದ್ದುದಕ್ಕೂ ನಮಗೆ ಪುರಾವೆಗಳು ದೊರಕುತ್ತವೆಯಾಗಲಿ, ಇಂದು ನಾವು ಅರ್ಥಮಾಡಿಕೊಂಡಿರುವ ರೀತಿಯಲ್ಲಿ ಬ್ಯಾಂಕಿಂಗ್ ವ್ಯವಹಾರ ಅಂದು ನಡೆಯುತ್ತಿರಲಿಲ್ಲ. ಠೇವಣಿಗಳ ಸ್ವೀಕಾರ, ಸಾಲ ನೀಡಿಕೆ ಇವು ನಡೆಯುತ್ತಿದ್ದರೂ ಉದರಿಯ ಸೃಷ್ಟಿಯಾಗುತ್ತಿರಲಿಲ್ಲ. ನೋಟುಗಳ ಸೃಷ್ಟಿಯನ್ನಂತೂ ಆಗಿನ ಕಾಲದವರು ಕನಸಿನಲ್ಲೂ ಕಂಡಿರಲಿಲ್ಲ. ಅಮೂಲ್ಯವಾದ, ತಕ್ಕಮಟ್ಟಿಗೆ ಅನಶ್ವರವಾದ, ಎಲ್ಲರೂ ಸುಲಭವಾಗಿ ಗುರುತಿಸಬಹುದಾದ, ಆದಾಗ್ಯೂ ವಿರಳವಾದ ಲೋಹಗಳು—ಮುಖ್ಯವಾಗಿ ಚಿನ್ನ ಬೆಳ್ಳಿ—ಆಗಿನ ಹಣದ ಸಾಮಗ್ರಿಗಳಾಗಿದ್ದುವು. ಇಂಥ ಹಣವನ್ನು ಪಡೆಯುವುದು, ಕೊಡುವುದು—ಇವಿಷ್ಟಕ್ಕೇ ಅಂದಿನ ಲೇವಾದೇವಿಗಳು ಸಾಮಾನ್ಯವಾಗಿ ಸೀಮಿತವಾಗಿದ್ದುವು.

ಭಾರತದಲ್ಲಿ ವೇದಗಳ ಕಾಲದಷ್ಟು ಹಿಂದೆಯೇ ಲೇವಾದೇವಿಗಳು ನಡೆಯುತ್ತಿದ್ದುದು ಖಚಿತವಾಗಿದೆ. ಹಣ ಸಾಲ ನೀಡುವುದು ಆಗ ಲಾಭದಾಯಕ ವೃತ್ತಿಯಾಗಿತ್ತು. ಸಾಲ ನೀಡುವವನನ್ನು ಶತಪಥ ಬ್ರಾಹ್ಮಣದಲ್ಲಿ ಕುಸೀದನ್ ಎಂದು ಕರೆಯಲಾಗಿದೆ. ತೈತ್ತಿರೀಯ ಬ್ರಾಹ್ಮಣದ ಪ್ರಕಾರ 'ಕುಸೀದ' ಎಂದರೆ ಸಾಲ. ಆಗಿನ ನಾಣ್ಯಪದ್ಧತಿಯ ಬಗ್ಗೆ ನಮಗೆ ಪುರಾವೆಗಳಿಲ್ಲ. ಆಗಿನ ನಾಣ್ಯಗಳು ಸಿಕ್ಕಿಲ್ಲ. ಅಂತೂ ವರ್ಷಕ್ಕೆ ಸೇ. 15ರಂತೆ ಬಡ್ಡಿ ವಿಧಿಸುವುದು ಸಾಮಾನ್ಯವಾಗಿ ಸ್ವೀಕೃತವಾದ ಪದ್ಧತಿಯಾಗಿ ವಿಕಾಸ ಹೊಂದಿದಂತೆ ಕಾಣುತ್ತದೆ. ಇಂದು ಬ್ಯಾಂಕುಗಳು ಅನುಸರಿಸುತ್ತಿರುವ ಭಿನ್ನಕ (ಡಿಫರೆನ್ಷಿಯಲ್) ಬಡ್ಡಿ ದರ, ಸಾಲದ ಆದ್ಯತೆಯ ಕ್ಷೇತ್ರಗಳು ಮುಂತಾದ ಪರಿಕಲ್ಪನೆಗಳು ಆಗಲೂ ತಮ್ಮದೇ ಆದ ರೀತಿಯಲ್ಲಿ ಜೀವಂತವಾಗಿದ್ದುವೆಂದು ಕಾಣುತ್ತದೆ. ಒಂದೊಂದು ಜಾತಿಗೆ ಒಂದೊಂದು ಬಡ್ಡಿ ದರ ಇದ್ದಿರಬೇಕು. ಕೆಲವು ಜಾತಿಗಳಿಗೆ ಆದ್ಯತೆಯೂ ಇತ್ತು. ಲೇವಾದೇವಿ ವೈಶ್ಯರ ಏಕಸ್ವಾಮ್ಯವಾಗಿತ್ತು. ಬ್ರಾಹ್ಮಣನಾಗಲಿ, ಕ್ಷತ್ರಿಯನಾಗಲಿ ಬಡ್ಡಿಯ ಮೇಲೆ ಸಾಲ ಕೊಡುವ ವ್ಯವಹಾರ ಮಾಡುವಂತಿರಲಿಲ್ಲ.

ವೇದಗಳ ಅನಂತರದ ಕಾಲದಲ್ಲಿ ಈ ಕಸುಬು ಹೊರವಾಗಿ ಬೆಳೆಯಿತೆಂಬುದಕ್ಕೆ ದಾಖಲೆಗಳಿವೆ. ಅನೇಕ ಸ್ಮೃತಿಗಳಲ್ಲಿ ಈ ಬಗ್ಗೆ ವಿವರಗಳಿವೆ. ಸಾಲಗಳ ನಾನಾ ಬಗೆಗಳನ್ನು ಹೆಸರಿಸಲಾಗಿದೆ. ಆಧಾರರಹಿತ, ಆಧಾರವುಳ್ಳದ್ದು(ಪ್ರತಿಭೂ), ಒತ್ತೆಯಿರುವುದು (ಅಧಿ)—ಹೀಗೆ ಮುಖ್ಯವಾದ ಮೂರು ಬಗೆಗಳನ್ನು ಕಾಣಬಹುದಾಗಿದೆ. ಆಧಾರ, ಒತ್ತೆ, ಜಾಮೀನು ಇವುಗಳ ಹಲವು ಬಗೆಗಳ ವಿವರಣೆಗಳಿವೆ. ಬಡ್ಡಿಯ ದರಗಳಲ್ಲೂ ವ್ಯತ್ಯಾಸಗಳಿದ್ದುವು. ಶ್ರೇಣಿಗಳು, ಪಾಲುದಾರಿಕೆಗಳು, ಕೂಡುಬಂಡವಾಳ ಸಂಸ್ಥೆಗಳು ಇವು ಸಾಮೂಹಿಕ ಉದರಿ ವ್ಯವಹಾರದ ಬೆಳವಣಿಗೆಗೆ ಕಾರಣಗಳಾಗಿದ್ದುವು. ಠೇವಣಿಯ ಸ್ವೀಕಾರ, ಸಾಲ ನೀಡಿಕೆ ಇವಕ್ಕೆ ಸಂಬಂಧಿಸಿದ ವಿಸ್ತೃತ ನಿಯಮಗಳನ್ನು ಧರ್ಮಶಾಸ್ತ್ರಗಳು ವಿಧಿಸುತ್ತವೆ. ಆದ್ದರಿಂದ ಭಾರತದಲ್ಲಿ ಒಂದು ರೀತಿಯ ಬ್ಯಾಂಕಿಂಗ್ ಇತ್ತೆಂದು ಹಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಠೇವಣಿ ಸ್ವೀಕಾರ ಮತ್ತು ಸಾಲ ನೀಡಿಕೆಯೇ ಅಲ್ಲದೆ ಹಣದ ರವಾನೆ, ಕೆಟ್ಟ ಹಣವನ್ನು ಪಡೆದು ಒಳ್ಳೆಯ ಹಣದ ಪಾವತಿ ಮುಂತಾದ ವ್ಯವಹಾರಗಳನ್ನೂ ಹಳೆಯ ಕಾಲದ ಬ್ಯಾಂಕರುಗಳು ಮಾಡುತ್ತಿದ್ದರು. ದೇಶದಲ್ಲಿ ಹಲವು ಬಗೆಯ ನಾಣ್ಯಗಳು ಚಲಾವಣೆಯಲ್ಲಿದ್ದುದರಿಂದ ಅವುಗಳ ವಿನಿಮಯ ಕಾರ್ಯ ಬಹಳ ಮುಖ್ಯವಾಗಿತ್ತು.

ಕ್ರಿ.ಪೂ. 2000ದಷ್ಟು ಹಿಂದೆ ಬ್ಯಾಬಿಲಾನಿನ ದೇವಸ್ಥಾನಗಳು ಹಣದ ವ್ಯವಹಾರ ನಡಸುತ್ತಿದ್ದುದಕ್ಕೆ ದಾಖಲೆಗಳಿವೆ. ದೇವಸ್ಥಾನಗಳು ಪವಿತ್ರ ಸ್ಥಳಗಳೆಂದು ಪರಿಗಣಿತವಾಗಿದ್ದುದರಿಂದ, ದೇವರೇ ಅವನ್ನು ರಕ್ಷಿಸುವನೆಂಬ ನಂಬಿಕೆಯಿದ್ದದ್ದರಿಂದ ದರೋಡೆಗಾರರು ಅವನ್ನು ಪ್ರವೇಶಿಸಲು ಹೆದರುತ್ತಿದ್ದರು. ಹಣವನ್ನು ಅಲ್ಲಿ ಭದ್ರವಾಗಿ ಇಡಬಹುದೆಂಬ ಭರವಸೆಯಿತ್ತು. ದೇಗುಲಗಳು ಸಾಲವನ್ನೂ ನೀಡುತ್ತಿದ್ದುವು. ಆದ್ದರಿಂದ ಆಗಿನ ಕಾಲದ ವ್ಯಾಪಾರಿಗಳೂ ಬ್ಯಾಂಕಿಂಗಿನ ಕಾರ್ಯಭಾರಗಳನ್ನು ಸ್ವಲ್ಪಮಟ್ಟಿಗೆ ನಿರ್ವಹಿಸುತ್ತಿದ್ದರು. ಕ್ರಿ.ಪೂ. 6ನೆಯ ಶತಮಾನದಲ್ಲಿ ಬ್ಯಾಬಿಲಾನಿನಲ್ಲಿದ್ದ ಇಗಿಬಿ ಬ್ಯಾಂಕ್ ಒಂದು ಉದಾಹರಣೆ. ಗ್ರೀಸಿನ ದೇಗುಲಗಳಲ್ಲೂ ಕ್ರಿ.ಪೂ. 4ನೆಯ ಶತಮಾನದ ವೇಳೆಗೆ ಬ್ಯಾಂಕಿಂಗ್ ಸದೃಶವಾದ ವ್ಯವಹಾರಗಳು ನಡೆಯುತ್ತಿದ್ದುವು. ಇಂಥ ವ್ಯವಹಾರ ನಡಸುತ್ತಿದ್ದ ಸಾರ್ವಜನಿಕ ಹಾಗೂ ಖಾಸಗಿ ಸಂಸ್ಥೆಗಳು ಕೂಡ ಇದ್ದುವು. ಠೇವಣಿ ಸ್ವೀಕಾರ, ಸಾಲ ನೀಡಿಕೆ, ನಾಣ್ಯ ಪರೀಕ್ಷೆ ಹಾಗೂ ವಿನಿಮಯ—ಇಂಥ ಕಾರ್ಯಗಳನ್ನೆಲ್ಲ ಈ ಸಂಸ್ಥೆಗಳು ನಿರ್ವಹಿಸುತ್ತಿದ್ದುವು. ಅನಂತರ ಬಂದ ರೋಮನ್ ಚಕ್ರಾಧಿಪತ್ಯದ ಮೇಲೂ ಇವು ಪ್ರಭಾವ ಬೀರಿದುವು. ಸಾಲ ತೀರುವೆಗಾಗಿ ಬ್ಯಾಂಕಿಗೆ ಹಣ ಪಾವತಿ ಮಾಡುವುದಕ್ಕೆ ರೋಮನ್ ಕಾನೂನಿನಲ್ಲಿ ಮನ್ನಣೆ ನೀಡಲಾಗಿತ್ತು.

ಕ್ರಿ.ಶ. 5ನೆಯ ಶತಮಾನದ ವೇಳೆಗೆ ರೋಮನ್ ಚಕ್ರಾಧಿಪತ್ಯ ಒಡೆಯಿತು. ಮುಂದೆ 10ನೆಯ ಶತಮಾನದ ವರೆಗೂ ಈ ನಿಟ್ಟಿನಲ್ಲಿ ಯಾವ ಗಮನಾರ್ಹ ಬೆಳವಣಿಗೆಯೂ ಆಗಲಿಲ್ಲ. ವ್ಯಾಪಾರ ಇಳಿಮೊಗನಾದ್ದರಿಂದ ಬ್ಯಾಂಕಿಂಗ್

ವ್ಯವಹಾರಕ್ಕೆ ಅಷ್ಟೇನೂ ಆಸ್ಪದ ಇರಲಿಲ್ಲ. ಬಡ್ಡಿಯ ಮೇಲೆ ಹಣ ಸಾಲ ನೀಡುವುದಕ್ಕಿದ್ದ ನಾನಾ ಬಗೆಯ ನಿರ್ಬಂಧಗಳು ಬೆಳವಣಿಗೆಗೆ ಅಡ್ಡಿಗಳಾಗಿದ್ದುವು. ಲೇವಾ ದೇವಿ ಮಾಡುವವರನ್ನು ಅಂದಿನ ಸಮಾಜ ತುಂಬ ಕೀಳಾಗಿ ಕಾಣುತ್ತಿತ್ತು.

### ಮಧ್ಯಯುಗದಲ್ಲಿ

ಆದರೆ ಕ್ರಮಕ್ರಮವಾಗಿ ವ್ಯಾಪಾರ ಕುದುರಿತು. ಹಣದ ಪ್ರಾಮುಖ್ಯ ಮತ್ತೆ ಬೆಳೆಯತೊಡಗಿತು. ಖಾಸಗಿ ವ್ಯಕ್ತಿಗಳೂ ಸರ್ಕಾರಿ ಪ್ರಾಧಿಕಾರಿಗಳೂ ತಮ್ಮ ಅಗತ್ಯಗಳಿಗಾಗಿ ಹಣದ ಸಾಲವನ್ನು ಬಯಸತೊಡಗಿದರು. ದಾನದತ್ತಿಗಳಿಂದಲೂ ಬಾಡಿಗೆಯಿಂದಲೂ ಅಗಾಧ ಹಣ ಸಂಪಾದನೆ ಮಾಡುತ್ತಿದ್ದ ಮಠಗಳು ಲೇವಾದೇವಿಯಲ್ಲಿ ನಿರತವಾದುವು. ಅವು ಸಾಲ ನೀಡುತ್ತಿದ್ದದ್ದು ವಿಶೇಷವಾಗಿ ಸ್ಥಳೀಯ ರೈತರಿಗೆ, ಜಮೀನುದಾರರಿಗೆ. ಅನೇಕ ವೇಳೆ ಅಧಿಕಾರಿಗಳೂ ಶ್ರೀಮಂತರೂ ಪ್ರಭುಗಳೂ ಚಕ್ರವರ್ತಿಯೂ ಸಾಕ್ಷಾತ್ ಪೋಪರೂ ಸಾಲ ತೆಗೆಯುತ್ತಿದ್ದರು. ಇದರ ಹಿಂದೆ ಬಲವಂತವೂ ಇರುತ್ತಿತ್ತು. ಕ್ರಮೇಣ ಅನೇಕ ಶ್ರೀಮಂತರೂ ಸರದಾರರೂ ತಾವು ಸಂಪಾದಿಸಿದ ಹಣವನ್ನು ಲೇವಾದೇವಿಯಲ್ಲಿ ತೊಡಗಿಸಿದರು. ಹೀಗೆ ಹಣದ ಬಲೆ ವಿಸ್ತರಿಸುತ್ತಿತ್ತು.

ಮಧ್ಯಯುಗದಲ್ಲಿ ಸಾಲ ನೀಡಿಕೆಯು ವೃತ್ತಿ ಯೆಹೂದ್ಯರದಾಯಿತು. ಇವರು ಈ ಕ್ಷೇತ್ರದಲ್ಲಿ ಪ್ರಾಮುಖ್ಯ ಗಳಿಸಿದ್ದಕ್ಕೆ ಕಾರಣಗಳೇನೆಂಬುದು ತಿಳಿದಿಲ್ಲ. ಕ್ರೈಸ್ತಧರ್ಮ ವಿಧಿಸಿದ್ದ ನಿರ್ಬಂಧಗಳು ಇವರಿಗೆ ಅನ್ವಯವಾಗದಿದ್ದುದರಿಂದ ಇವರು ಈ ವ್ಯವಹಾರದಲ್ಲಿ ಹೆಚ್ಚಾಗಿ ನಿರತರಾಗಿದ್ದಿರಬಹುದು. ಕ್ರಮೇಣ ಇತರರೂ ಈ ಕ್ಷೇತ್ರವನ್ನು ಪ್ರವೇಶಿಸಿ ಯೆಹೂದ್ಯರೊಂದಿಗೆ ಸ್ಪರ್ಧೆಗೆ ಇಳಿದರು. ಬರುಬರುತ್ತ ಇವರ ಸ್ವಂತ ಬಂಡವಾಳ ಸಾಲದಾಗಿ, ಇತರ ಮೂಲಗಳಿಂದ ಹಣ ಎತ್ತಿ ಸಾಲ ನೀಡುವುದು ಅಗತ್ಯವಾಯಿತು.

14ನೆಯ ಶತಮಾನದ ವೇಳೆಗೆ ಯೂರೋಪಿನಲ್ಲಿ ವ್ಯಾಪಾರ ತಕ್ಕಮಟ್ಟಿಗೆ ಬೆಳೆದಿತ್ತು. ಇಟಲಿಯ ನಗರಗಳೂ ಈಗ ಬೆಲ್ಜಿಯಂ ದೇಶದಲ್ಲಿರುವ ಬ್ರೂಜಸ್, ಆಂಟ್ವರ್ಪ್ ಮುಂತಾದವೂ ಪ್ರಮುಖ ವ್ಯಾಪಾರಕೇಂದ್ರಗಳಾದುವು. ಸರಕು ದಾಸ್ತಾನುಗಳು ಬೆಳೆದುವು. ಸ್ಥಳೀಯವಾಗಿ ಬ್ಯಾಂಕಿಂಗ್ ವ್ಯವಹಾರಗಳು ವಿಕಾಸಗೊಂಡುವು. ಕೆಲವು ಪ್ರಮುಖ ಸಾರಿಗೆ ಕೇಂದ್ರಗಳಲ್ಲಿ ಅಂತರರಾಷ್ಟ್ರೀಯ ಖ್ಯಾತಿಯ ಸಂತೆಗಳು ನಡೆಯುತ್ತಿದ್ದುವು. ಫ್ರಾನ್ಸಿನ ಷಾಂಪೇನ್ ಪ್ರದೇಶದಲ್ಲಿ ಸೇರುತ್ತಿದ್ದ ಸಂತೆಗಳು ಬಹಳ ಪ್ರಸಿದ್ಧವಾಗಿದ್ದುವು. ಇಲ್ಲಿ ಸಂಚಾರಿ ಬ್ಯಾಂಕರುಗಳ ಮೂಲಕ ಹಣದ ವ್ಯವಹಾರ ನಡೆಯುತ್ತಿತ್ತು. ಅಂತರರಾಷ್ಟ್ರೀಯ ಉಣ್ಣೆ ವ್ಯಾಪಾರಕ್ಕೆ ಧನಪೋಷಣೆ ಮಾಡುತ್ತಿದ್ದ ಅಂತರರಾಷ್ಟ್ರೀಯ ಲೇವಾದೇವಿಗಾರರ ತಂಡವೂ ಬೆಳೆದಿತ್ತು. ಇವರು ಪೋಪರ ಪರವಾಗಿ ಹಣ ವಸೂಲಿ ಮಾಡಿ ರವಾನೆ ಮಾಡುತ್ತಿದ್ದರಲ್ಲದೆ ದೊರೆಗಳಿಗೂ ಶ್ರೀಮಂತರಿಗೂ ಸಾಲ ನೀಡುತ್ತಿದ್ದರು.

ಷಾಂಪೇನಿನ ಸಂತೆಗಳಲ್ಲಿ ವ್ಯವಹರಿಸುತ್ತಿದ್ದ ಸಂಚಾರಿ ಬ್ಯಾಂಕರುಗಳು ತಮ್ಮ ಗ್ರಾಹಕರ ಪರಸ್ಪರ ಕೊಡು-ಕೊಳುಗಳನ್ನು ಇತ್ಯರ್ಥಮಾಡುತ್ತಿದ್ದ ರೀತಿ ಗಮನಾರ್ಹವಾದ್ದು. ಸರಕು ವಿಕ್ರಯವಾದಾಗ ಅದರ ಮೌಲ್ಯವನ್ನು ಸಂಬಂಧಪಟ್ಟ ವರ್ತಕರ ಖಾತೆಗಳಲ್ಲಿ ದಾಖಲು ಮಾಡಲಾಗುತ್ತಿತ್ತು. ಸಂತೆಯ ಅಂತ್ಯದಲ್ಲಿ ಪರಸ್ಪರವಾಗಿ ಕೊಡಬೇಕಾದ, ಬರಬೇಕಾದ ಹಣಗಳ ಲೆಕ್ಕಾಚಾರ ಮಾಡಿ, ಅಂತಿಮವಾದ ಶಿಲ್ಕನ್ನು ನಗದಾಗಿಯೋ ಹುಂಡಿಯ ರೂಪದಲ್ಲೋ ಪಾವತಿಗೆ ವ್ಯವಸ್ಥೆ ಮಾಡಲಾಗುತ್ತಿತ್ತು.

ಮೆಡಿಟರೇನಿಯನ್ ಸಮುದ್ರದ ದಂಡೆಯ ನಗರಗಳಾದ ವೆನಿಸ್, ಜಿನೋವ, ಬಾರ್ಸಿಲೋನ ಮುಂತಾದುವುಗಳಲ್ಲಿದ್ದ ಸ್ಥಾಯೀ ಬ್ಯಾಂಕರುಗಳು ಆಧುನಿಕ ವಾಣಿಜ್ಯ ಬ್ಯಾಂಕುಗಳ ಪಿತಾಮಹರು ಎಂದು ಹೇಳಲಾಗಿದೆ. ಅವರು ತಮ್ಮ ಗ್ರಾಹಕರಿಂದ ಠೇವಣಿ ಪಡೆಯುತ್ತಿದ್ದರು. ಆ ಗ್ರಾಹಕರು ಸಾಮಾನ್ಯವಾಗಿ ವ್ಯಾಪಾರಿಗಳಾಗಿದ್ದರು. ಅವರಲ್ಲಿ ಒಬ್ಬರು ಇನ್ನೊಬ್ಬರಿಗೆ ಹಣ ಪಾವತಿ ಮಾಡಬೇಕಾಗಿ ಬಂದಾಗ ಬ್ಯಾಂಕರುಗಳು ಆ ಗ್ರಾಹಕರ ಖಾತೆಗಳಲ್ಲಿ ಒಂದರಿಂದ ಇನ್ನೊಂದಕ್ಕೆ ಹಣ ವರ್ಗ ಮಾಡುತ್ತಿದ್ದರು. ಇದನ್ನು ಬ್ಯಾಂಕರುಗಳು ಮಾಡುತ್ತಿದ್ದದ್ದು ಗ್ರಾಹಕರ ಎದುರಿನಲ್ಲೇ. 15ನೆಯ ಶತಮಾನದ ವೇಳೆಗೆ ವೆನಿಸಿನ ಬ್ಯಾಂಕರುಗಳು ತಮ್ಮ ಗ್ರಾಹಕರಿಗೆ ಓವರ್‌ಡ್ರಾಫ್ಟ್ (ಮೀರಳೆತ) ಸೌಲಭ್ಯ ನೀಡುತ್ತಿದ್ದುದುಂಟು. ಆ ಕಾಲದಲ್ಲಿ ಅನೇಕ ಬ್ಯಾಂಕರುಗಳು ದಿವಾಳಿಯಾದದ್ದೂ ಉಂಟು. ಆದ್ದರಿಂದ ಸಾರ್ವಜನಿಕ ಬ್ಯಾಂಕೊಂದರ ಸ್ಥಾಪನೆಯಾಗಬೇಕೆಂಬುದು ಅನೇಕರ ಬೇಡಿಕೆಯಾಗಿತ್ತು.

ಈ ಬೇಡಿಕೆಯ ಪೂರೈಕೆಗಾಗಿ 1587ರಲ್ಲಿ ವೆನಿಸಿನಲ್ಲಿ ಬ್ಯಾಂಕೋ ಡೆಲಾ ಪಿಯಾಜಾ ಡಿ ರಿಯಾಲ್ಟೊ ಸ್ಥಾಪಿತವಾಯಿತು. ನಾಣ್ಯರೂಪದಲ್ಲಿ ಠೇವಣಿಯ ಸ್ವೀಕಾರ, ಒಂದು ಖಾತೆಯಿಂದ ಇನ್ನೊಂದು ಖಾತೆಗೆ ಇದರ ವರ್ಗಾವಣೆ, ಹುಂಡಿಗಳ ಪಾವತಿ—ಇವು ಬ್ಯಾಂಕಿನ ಮುಖ್ಯ ಕಾರ್ಯಭಾರಗಳಾಗಿದ್ದುವು. ಆದರೆ ಇದು ಸಾಲ ನೀಡುವಂತಿರಲಿಲ್ಲ. ಬ್ಯಾಂಕಿಗೆ ಸಂಪಾದನೆಯೂ ಇರಲಿಲ್ಲವಾದ್ದರಿಂದ ಠೇವಣಿಗಳ ಮೇಲೆ ಇದು ಬಡ್ಡಿ ಕೊಡುತ್ತಿರಲಿಲ್ಲ. ಇದು ನೀಡುತ್ತಿದ್ದ ಸೇವೆಗಾಗಿ ಏನೂ ಶುಲ್ಕ ವಿಧಿಸುತ್ತಿರಲಿಲ್ಲ. ಬ್ಯಾಂಕಿನ ಖರ್ಚುಗಳನ್ನೆಲ್ಲ ಸರಕಾರವೇ ವಹಿಸಿಕೊಳ್ಳುತ್ತಿತ್ತು.

ಸಾಲ ನೀಡಬಾರದೆಂಬುದು ಈ ಬ್ಯಾಂಕಿನ ನಿಬಂಧನೆ ಯಾದರೂ ಇದು ಆಗಾಗ ಸಾಲ ನೀಡತೊಡಗಿತ್ತು. ಸರಕಾರವೇ ಸಾಲ ಪಡೆಯುತ್ತಿತ್ತು. ಇದರ ಫಲವಾಗಿ ಬ್ಯಾಂಕು ತೊಂದರೆಗೆ ಸಿಕ್ಕಿಕೊಂಡಿತು. ಸರಕಾರದ ಹಣದ ಅಗತ್ಯಗಳ ಪೂರೈಕೆಗಾಗಿ ಸ್ಥಾಪಿತವಾದ ಸಂಸ್ಥೆ ಬ್ಯಾಂಕೋ ಗಿರೋ (1619). ಸರಕಾರ ಅನೇಕ ವ್ಯಕ್ತಿಗಳಿಂದ ಸಾಲ ತೆಗೆದುಕೊಂಡಿತ್ತು. ಇದಕ್ಕೆ ಪ್ರತಿಯಾಗಿ ಆ ಸಾಲಿಗರಿಗೆ ಬ್ಯಾಂಕೋ ಗಿರೋದಲ್ಲಿ ಠೇವಣಿಗಳನ್ನು ನೀಡಲಾಯಿತು. 1638ರಲ್ಲಿ ಇವೆರಡೂ ಬ್ಯಾಂಕುಗಳು ಒಂದಾದುವು. ಹೊಸ ಬ್ಯಾಂಕು 1806ರ ವರೆಗೂ ವ್ಯವಹಾರ ನಡೆಸುತ್ತಿತ್ತು. ಇವಲ್ಲದೆ ಇನ್ನೂ ಅನೇಕ ಸಾರ್ವಜನಿಕ ಬ್ಯಾಂಕುಗಳು ಆ ಕಾಲದಲ್ಲಿ ಇದ್ದುವು.

1609ರಲ್ಲಿ ಸ್ಥಾಪಿತವಾದ ಆಮ್‌ಸ್ಟರ್‌ಡ್ಯಾಂ ಬ್ಯಾಂಕ್ ಕೂಡ ಬ್ಯಾಂಕೋ ಡೆಲಾ ಪಿಯಾಜಾ ಡಿ ರಿಯಾಲ್ಟೊವಿನಂತೆಯೇ ಕೆಲಸ ಮಾಡುತ್ತಿತ್ತು. ಠೇವಣಿ ಸ್ವೀಕಾರ ಮತ್ತು ವರ್ಗಾವಣೆ, ನಾಣ್ಯಗಳ ವಿನಿಮಯ, ಟಂಕಸಾಲೆಗಾಗಿ ಚಿನ್ನ-ಬೆಳ್ಳಿಯ ಮತ್ತು ಚಲಾವಣೆಯಲ್ಲಿಲ್ಲದ ನಾಣ್ಯಗಳ ಕೊಳ್ಳಿಕೆ, ಹುಂಡಿಗಳ ತೀರುವೆ ಮುಂತಾದವು ಇದರ ಕಾರ್ಯಭಾರಗಳು. ಖಾತೆಗಳಲ್ಲಿ ಮೀರೆಳೆತವನ್ನು ನಿಷೇಧಿಸಲಾಗಿತ್ತು. ಆದಾಗ್ಯೂ ಕೆಲವೊಮ್ಮೆ ಅದು ಸಾಲ ನೀಡುತ್ತಿತ್ತು. ಆಮ್‌ಸ್ಟರ್‌ಡ್ಯಾಂ ನಗರ ಸಂಸ್ಥೆಯೂ ಡಚ್ ಈಸ್ಟ್ ಇಂಡಿಯ ಕಂಪೆನಿಯೂ ಅದರಿಂದ ಸಾಲ ಪಡೆದಿದ್ದುವು. 18ನೆಯ ಶತಮಾನದ ಅಂತ್ಯದಲ್ಲಿ ನಡೆದ ಫ್ರೆಂಚ್ ಯುದ್ಧಗಳ ಸಮಯದಲ್ಲಿ ಬ್ಯಾಂಕು ತುಂಬ ನಷ್ಟ ಅನುಭವಿಸಬೇಕಾಗಿ ಬಂತು. ಕೊನೆಗೆ 1819ರಲ್ಲಿ ಅದು ಮುಳುಗಿ ಹೋಯಿತು.

### 'ಬ್ಯಾಂಕ್' ಪದದ ವ್ಯುತ್ಪತ್ತಿ

'ಬ್ಯಾಂಕ್' ಎನ್ನುವ ಪದ ಹೇಗೆ ಬಂತು ಎಂಬುದು ಕುತೂಹಲಕರವಾದ ಪ್ರಶ್ನೆ. ಇಟಲಿಯ ನಗರಗಳಲ್ಲಿ ಹಣದ ವ್ಯವಹಾರ ನಡಸುತ್ತಿದ್ದ ಯೆಹೂದ್ಯರಿಂದ ಈ ಪದ ಬಂತೆಂಬುದು ಒಂದು ಊಹೆ. ಇವರು ಪೇಟೆಯಲ್ಲಿ ಬೆಂಚುಗಳನ್ನಿಟ್ಟು ಅವುಗಳ ಮೇಲೆ ಹಣದ ವ್ಯವಹಾರ ನಡಸುತ್ತಿದ್ದರು. ಇಟಾಲಿಯನ್ ಭಾಷೆಯಲ್ಲಿ ಬೆಂಚಿಗೆ ಬ್ಯಾಂಕೋ ಎನ್ನುತ್ತಾರೆ. ಬ್ಯಾಂಕೋ ಎಂಬುದೇ ಮುಂದೆ ಬ್ಯಾಂಕ್ ಎಂದು ಆಯಿತೆಂದು ಹೇಳಲಾಗಿದೆ. ಲೇವಾದೇವಿಗಾರ ತನ್ನ ದೇಣಿಗಳನ್ನೆಲ್ಲ ತೀರಿಸಲಾರದೆ ಹೋದಾಗ ಬ್ಯಾಂಕೋವನ್ನು—ಬೆಂಚನ್ನು—ಮುರಿದುಹಾಕಲಾಗುತ್ತಿತ್ತು. (ಎರಪ್ಟ್). ಆದ್ದರಿಂದಲೇ ದಿವಾಳಿ ತೆಗೆದವನನ್ನು ಬ್ಯಾಂಕ್ರಪ್ಟ್ ಎಂದು ಕರೆಯುವುದು ರೂಢಿಗೆ ಬಂತಂತೆ.

ಆದರೆ ಬ್ಯಾಂಕಿನ ಮೂಲ ಇಟಾಲಿಯನ್ 'ಬ್ಯಾಂಕೋ' ಅಲ್ಲ, ಜರ್ಮನ್ 'ಬಾಕ್'—ಎಂಬುದು ಇನ್ನೊಂದು ವಾದ. ಜರ್ಮನ್ ಭಾಷೆಯಲ್ಲಿ 'ಬ್ಯಾಕ್' ಎಂದರೆ ಕೂಡುನಿಧಿ. ಈಗಿನ ಜರ್ಮನಿ ಪ್ರದೇಶದಲ್ಲಿದ್ದ ಜರ್ಮಾನಿಕ್ ಜನರು ಇಟಲಿಯನ್ನು ಆಕ್ರಮಿಸಿಕೊಂಡಾಗ 'ಬ್ಯಾಕ್' ಎಂಬುದು ಅಲ್ಲಿ 'ಬ್ಯಾಂಕೋ' ಆಯಿತು; ಇಟಲಿಯ ಲೇವಾದೇವಿಗಾರರು ಮಾಡುತ್ತಿದ್ದ ವ್ಯವಹಾರಕ್ಕೆ ಈ ಹೆಸರು ಬಂತು ಎನ್ನಲಾಗಿದೆ.

ಮಧ್ಯಯುಗದ ಲೇವಾದೇವಿಗಾರರು, ಅಂತರರಾಷ್ಟ್ರೀಯ ಖ್ಯಾತಿಯ ವರ್ತಕರು—ಇವರು ಆಧುನಿಕ ಬ್ಯಾಂಕಿನ ಅಸ್ತಿಭಾರ ಹಾಕಿದರೆಂಬುದು ನಿಜ, ಇವರ ಜೊತೆಗೆ ಇಂಗ್ಲೆಂಡಿನ ಅಕ್ಕಸಾಲಿಗರೂ ಬ್ಯಾಂಕಿನ ಶಿಲಾನ್ಯಾಸದಲ್ಲಿ ಕೈ ಕೂಡಿಸಿದರೆಂದು ಪ್ರತೀತಿ. ಅವರ ಬಳಿ ಇದ್ದ ಭದ್ರ ತಿಜೋರಿಗಳಲ್ಲಿ ಆ ಕಾಲದ ಶ್ರೀಮಂತರೂ ವ್ಯಾಪಾರಿಗಳೂ ಹಣ ಮತ್ತು ಅಮೂಲ್ಯ ವಸ್ತುಗಳನ್ನು ಠೇವಣಿಯಾಗಿ ಇಡುತ್ತಿದ್ದರಂತೆ. ಈ ಠೇವಣಿಗಳಿಗೆ ಪ್ರತಿಯಾಗಿ ಅಕ್ಕಸಾಲಿಗರು ಕೊಡುತ್ತಿದ್ದ ರಸೀತಿಗಳು ಈಗಿನ ಚೆಕ್ಕುಗಳಂತೆ ಚಲಾವಣೆಗೆ ಬರತೊಡಗಿದುವಂತೆ. ಆದ್ದರಿಂದ ಅಕ್ಕಸಾಲಿಗನನ್ನೂ ಆಧುನಿಕ ಬ್ಯಾಂಕಿನ ಆದ್ಯಪ್ರವರ್ತಕರ ಸಾಲಿಗೆ ಸೇರಿಸಬೇಕು ಎನ್ನಲಾಗಿದೆ.

ಆದರೆ ಇದೆಲ್ಲ ದೊಡ್ಡ ಕಥೆ. ಮುಂದಿನ ಅಧ್ಯಾಯಗಳಲ್ಲಿ ಈ ಕಥೆ ಸುರುಳಿಬಿಚ್ಚಿಕೊಳ್ಳುತ್ತ ಸಾಗುತ್ತದೆ.

---

**ನಿಜವೆ?**

ಹವೆ ಚೆನ್ನಾಗಿರುವಾಗ ನಿಮಗೆ ಕೊಡೆಯನ್ನು ಎರವಲಾಗಿ ಕೊಟ್ಟು,
ಮಳೆ ಬಂದಾಗ ಅದನ್ನು ವಾಪಸ್ ತೆಗೆದುಕೊಳ್ಳುವವನೇ ಬ್ಯಾಂಕರ್.

—ಅಜ್ಞಾತ

---

# ಪಾರಿಭಾಷಿಕ ಶಬ್ದಕೋಶ

ಮ. ನ. ಕುಲಕರ್ಣಿ
ಜಿ. ಎನ್. ನರಸಿಂಹಮೂರ್ತಿ

**ಬ್ಯಾಂಕಿಂಗ್ ವ್ಯವಹಾರಕ್ಕೆ ಸಂಬಂಧಿಸಿದಂತೆ ಇಂಗ್ಲಿಷಿನಲ್ಲಿ ಬಳಕೆಯಲ್ಲಿರುವ ಪಾರಿಬಾಷಿಕ ಪದಗಳ ಕೋಶ. ವರ್ಣಾನುಕ್ರಮದಲ್ಲಿ ಪ್ರಕಟವಾಗುತ್ತದೆ.**

**Abbreviation :** ಸಂಕ್ಷಿಪ್ತರೂಪ. ಉದಾ: ಭಾ.ಬ್ಯಾಂ.ಸಂ = ಭಾರತೀಯ ಬ್ಯಾಂಕರರ ಸಂಸ್ಥೆ.

**Abrasion of Coins :** ನಾಣ್ಯಗಳ ಸವೆತ. ಸತತವಾದ ಚಲಾವಣೆಯಿಂದ ಉಂಟಾಗುವ ಘರ್ಷಣೆಯಿಂದ ನಾಣ್ಯಗಳು ಸವೆದು ತಮ್ಮ ತೂಕವನ್ನು ಕಳೆದುಕೊಳ್ಳುವುದು.

**Absolute Title :** ಪರಮ ಹಕ್ಕು. ಯಾವುದೇ ಆಸ್ತಿಯ ಕಾನೂನುಬದ್ಧ ಸ್ವಾಧೀನದ ಹಕ್ಕು.

**Abstract :** ಗೋಷ್ವಾರೆ. ವ್ಯವಹಾರದ ದಾಖಲೆಗಳ, ದಸ್ತೈವಜುಗಳ ಸಾರಾಂಶ, ಸಂಗ್ರಹ, ತಿರುಳು.

**Acceptance :** ಒಪ್ಪಿಗೆ. ಸಮ್ಮತಿ. ಸ್ವೀಕೃತಿ. ಅಂಗೀಕಾರ. ತಸಲೀಮು. ಯಾವುದೇ ನೀಡಿಕೆಗೆ ಅಥವಾ ಆದೇಶಕ್ಕೆ ಒಪ್ಪಿಗೆ. ಹುಂಡಿಯ ಮೇಲೆ, ಅದರ ನಿಬಂಧನೆಗಳಿಗೆ ಅನುಗುಣವಾಗಿಯೋ, ಕೆಲವು ಷರತ್ತುಗಳು ಅಥವಾ ಉಪಾಧಿಗಳಿಗೆ ಒಳಪಟ್ಟೋ ಒಪ್ಪುವುದಾಗಿ ಬರೆದು ಸಹಿ ಹಾಕುವಿಕೆ.

**Acceptance of Credit :** ಉದರಿ ಸೌಲಭ್ಯ ಒಪ್ಪಿಗೆ. ಅಂತರರಾಷ್ಟ್ರೀಯ ವ್ಯಾಪಾರದಲ್ಲಿ ಹಣ ಪಾವತಿ ಮಾಡುವ ಒಂದು ವಿಧಾನ.ಉದಾ: ಲಂಡನ್ನಿನಲ್ಲಿರುವ ಒಪ್ಪಿಗೆ ಅಂಗಡಿಗಳು ನಾನಾ ದೇಶಗಳ ವಾಣಿಜ್ಯ ಕೇಂದ್ರಗಳಲ್ಲಿ ತಮ್ಮ ನಿಯೋಗಿಗಳ ಅಥವಾ ಅಧಿಕರ್ತೃಗಳ ಮೂಲಕ, ಆ ದೇಶಗಳಲ್ಲಿರುವ ವಿದೇಶಿ ವ್ಯಾಪಾರಿಗಳ ಋಣ ಪ್ರತ್ಯಯವನ್ನು (ಕ್ರೆಡಿಟ್ ವರ್ದಿನೆಸ್) ಅರಿತುಕೊಂಡಿರುತ್ತವೆ. ವಿದೇಶಿ ವ್ಯಾಪಾರಿಯೊಬ್ಬನ ಪ್ರತ್ಯಯ ಸಮರ್ಪಕವಾಗಿದೆಯೆನಿಸಿದಾಗ ಅವನ ಪರವಾಗಿ ಹುಂಡಿಯನ್ನು ಒಪ್ಪಲು ಅಥವಾ ಸ್ವೀಕರಿಸಲು ಇಂಥ ಒಪ್ಪಿಗೆ ಅಂಗಡಿ ಒಪ್ಪಿಗೆ ನೀಡುತ್ತದೆ. ಅವನಿಗಾಗಿ ಸಮ್ಮತಿ ಉದರಿ ಖಾತೆ ತೆರೆಯುತ್ತದೆ. ಆ ವ್ಯಾಪಾರಿ ಲಂಡನ್ನಿನ ನಿರ್ಯಾತದಾರನಿಂದ ಸರಕು ಕೊಂಡಾಗ ಆ ನಿತರ್ಯಾದಾರ ಈ ಒಪ್ಪಿಗೆ ಅಂಗಡಿಯ ಮೇಲೆ ಹುಂಡಿ ಬರೆಯುತ್ತಾನೆ. ವಿದೇಶಿ ಆಮದುದಾರನ ಪರವಾಗಿ ಈ ಅಂಗಡಿ ಅದನ್ನು ಒಪ್ಪುತ್ತದೆ. ಒಪ್ಪಿಗೆ ಅಂಗಡಿ ಸಮ್ಮತಿಸಿದ ಹುಂಡಿಯನ್ನು ಲಂಡನ್ನಿನಲ್ಲಿ ವಟಾಯಿಸಲು (ಡಿಸ್ಕೌಂಟ್) ಕಷ್ಟವೇನೂ ಇಲ್ಲ. ಹೀಗೆ ವಿದೇಶಿ ಆಮದುದಾರನಿಗೆ ಅಗತ್ಯವಾದ ಉದರಿ ಸೌಲಭ್ಯವೂ, ಲಂಡನ್ನಿನ ನಿರ್ಯಾತದಾರನಿಗೆ ಸರಕಿನ ಬಿಕರಿಯ ಮೇಲೆ ನಗದೂ ದೊರೆಯುತ್ತವೆ. ನೋಡಿ—Documentry Credit

**Acceptance for Honour :** ಮರ್ಯಾದಾರ್ಥ ಒಪ್ಪಿಗೆ, ಮರ್ಯಾದಾರ್ಥ ಸಮ್ಮತಿ. ಹುಂಡಿಯನ್ನು ಒಪ್ಪಬೇಕಾದವನು ಕಾರಣಾಂತರದಿಂದ ಅದನ್ನು ನಿರಾಕರಿಸಿದರೆ, ಅವನ ಪರವಾಗಿ ಮತ್ತೊಬ್ಬ, ಸ್ವೀಕರ್ತನ ಗೌರವವನ್ನು ಕಾಪಾಡಲೋಸುಗ, ಹುಂಡಿಗೆ ಒಪ್ಪಿಗೆ ನೀಡಬಹುದು. ಇದು ಮರ್ಯಾದಾರ್ಥ ಒಪ್ಪಿಗೆ ಅಥವಾ ಮರ್ಯಾದಾರ್ಥ ಸಮ್ಮತಿ.

**Acceptance Ledger :** ಹುಂಡಿ ಪಹಣಿ. ತನ್ನ ಗ್ರಾಹಕನ ಪರವಾಗಿ ಒಪ್ಪಲಾದ ಹುಂಡಿಗಳ ವಿವರಗಳನ್ನು ದಾಖಲಿಸಲು ಬ್ಯಾಂಕು ಇಟ್ಟಿರುವ ಪುಸ್ತಕ.

**Accepting Houses :** ಒಪ್ಪಿಗೆ ಅಂಗಡಿಗಳು. ಸಮ್ಮತಿ ಗೃಹಗಳು. ತಮ್ಮ ಗ್ರಾಹಕರಿಗಾಗಿ ತಮ್ಮ ಮೇಲೆ ಬರೆಯಲಾದ ಹುಂಡಿಗಳನ್ನು ಒಪ್ಪುವ ಸಂಸ್ಥೆಗಳು. ಋಣಪ್ರತ್ಯಯ ಉಳ್ಳಂಥ ಗ್ರಾಹಕರಿಗೆ ಉದರಿ ಸೌಲಭ್ಯ ನೀಡಿರುವ ಸಂದರ್ಭದಲ್ಲಿ ಅವರಿಗಾಗಿ ಇವುಗಳು ಹುಂಡಿಗಳನ್ನು ಒಪ್ಪುತ್ತವೆ. ವಿದೇಶಿ ವ್ಯಾಪಾರದಲ್ಲಿ ಪಾವತಿ ಮಾಡಲು ಇವುಗಳಿಂದ ವಿಶೇಷ ಅನುಕೂಲವಾಗಿದೆ. ಲಂಡನ್ನಿನ ಹಣದ ಪೇಟೆಯಲ್ಲಿ ಇವು ಪ್ರಮುಖವಾಗಿವೆ.

**Acceptor :** ಸ್ವೀಕರ್ತ. ಹುಂಡಿಯನ್ನು ಸ್ವೀಕರಿಸಿ, ಅದರ ನಿಬಂಧನೆಗಳನ್ನು ಒಪ್ಪಿ ಹಣ ಪಾವತಿ ಮಾಡುವವನು. ಹುಂಡಿಯ ನಿಬಂಧನೆಗಳನ್ನು ಒಪ್ಪಿ, ಅದರ ಮೇಲೆ "ಒಪ್ಪಿದ್ದೇನೆ" ಎಂದೋ, "ಸಮ್ಮತಿಸಿದ್ದೇನೆ" ಎಂದೋ, "ಸ್ವೀಕೃತ" "ಸಮ್ಮತ" ಎಂದೋ, "ಅಂಗೀಕರಿಸಿದ್ದೇನೆ" ಎಂದೋ ಬರೆದು ಸಹಿ ಹಾಕುವವನು.

**Accommodation Bill :** ದರದು ಹುಂಡಿ. ಸರಕುಗಳನ್ನು ಕೊಳ್ಳಲೆಂದೋ, ತಯಾರಿಕೆಗೆ ಅಗತ್ಯವಾದ ಸಾಮಗ್ರಿಗಳನ್ನು ಕೊಳ್ಳಲೆಂದೋ, ನೆರವು ನೀಡುವ ಉದ್ದೇಶದಿಂದ ಹುಂಡಿಯ ಕರ್ತ, ಸ್ವೀಕರ್ತ ಅಥವಾ ಹಿಂಬರಹದಾರನಾಗಿ ಸಹಿ ಮಾಡಿ ಈ ಹುಂಡಿಯ ವಟಾವಣೆ ಸಾಧ್ಯವಾಗುವಂತೆ ಮಾಡಲಾಗುವುದು ದರದು ಪೂರೈಕೆಗಾಗಿ ಅಥವಾ ಆರ್ಥಿಕ ನೆರವಿಗಾಗಿ ಈ ಹುಂಡಿಯ ಸೃಷ್ಟಿಯಾಗುವುದರಿಂದ ಇದಕ್ಕೆ ಈ ಹೆಸರು ಬಂದಿದೆ. ಕೆಲವು ವೇಳೆ ಯಾವ ಸರಕಿನ ವಹಿವಾಟೂ ಇಲ್ಲದೆಯೇ ಒಬ್ಬ ವ್ಯಕ್ತಿ ಇನ್ನೊಬ್ಬ ವ್ಯಕ್ತಿಯ ಮೇಲೆ ಹುಂಡಿಯನ್ನು ಬರೆದು, ಎರಡನೆಯ ವ್ಯಕ್ತಿ ಅದಕ್ಕೆ ಒಪ್ಪಿಗೆ ನೀಡಿದ ಮೇಲೆ ಬ್ಯಾಂಕಿನಲ್ಲಿ ಅದನ್ನು ವಟಾಯಿಸಿ ಹಣ ಪಡೆದುಕೊಳ್ಳುವುದುಂಟು.

**Accommodating Letter :** ಉದರಿ ಸೌಲಭ್ಯ ನೀಡಿಕೆ ಪತ್ರ.

**Account payee :** ಪ್ರಾಪ್ತಿಕರ್ತನ ಖಾತೆ. ಚೆಕ್ಕಿನ ರೇಖಣದ ಅಂಗವಾಗಿ ಐಚ್ಛಿಕವಾಗಿ ಬರೆಯುವ ಪದಗಳು. ಚೆಕ್ಕಿನ ಮುಖದ ಮೇಲೆ ಅಡ್ಡಲಾಗಿ ಎಳೆಯಲಾಗುವ ಎರಡು ಸಮಾನಾಂತರ ಛೇದಕ ರೇಖೆಗಳ ನಡುವೆ ಈ ಪದಗಳನ್ನು ಬರೆದರೆ ವಿಶಿಷ್ಟವಾದ ಅರ್ಥವುಂಟು. ಚೆಕ್ಕಿನ ವಸೂಲಿದಾರ ಬ್ಯಾಂಕು ಈ ಚೆಕ್ಕಿನ ಮೊಬಲಗು ವಸೂಲಿಯಾದಾಗ ಪ್ರಾಪ್ತಿಕರ್ತನ ಖಾತೆಗೆ ಈ ಮೊಬಲಗನ್ನು ಧನಿಸಬೇಕು. ಚೆಕ್ಕಿನ ಮೊಬಲಗು ಪ್ರಾಪ್ತಿಕರ್ತನಿಗೇ ಸೇರಬೇಕೆಂಬುದು ಇದರಿಂದ ಖಾತರಿಯಾಗುತ್ತದೆ. ನೋಡಿ—Crossing

**Accountable Receipt :** ಉತ್ತರದಾಯಿ ರಸೀತಿ, ಅಧಿಕೃತ ರಸೀತಿ. ಉದಾ: ಹಣವನ್ನು ಖಾತೆಯಲ್ಲಿ ದಾಖಲಿಸಿದ್ದಕ್ಕೆ ಕೊಟ್ಟ ರಸೀತಿ.

**Account :** ಖಾತೆ, ಲೆಕ್ಕ.

**Accrual of Income :** ವರಮಾನ ಸಂಚಯ, ವರಮಾನ ಪ್ರೋದ್ಭವನ.

**Accrued Interest :** ಸಂಚಿತ ಬಡ್ಡಿ. ಠೇವಣಿದಾರನಿಗೆ ಬ್ಯಾಂಕಿನಿಂದ, ಅಥವಾ ಬ್ಯಾಂಕಿಗೆ ಗ್ರಾಹಕನಿಂದ, ಸಲ್ಲಬೇಕಾದ, ಆದರೆ ಇನ್ನೂ ದಾಖಲಾಗದಿರುವ, ಪ್ರಾಪ್ತವಾಗದಿರುವ ಬಡ್ಡಿ.

**Act of Bankruptcy :** ದಿವಾಳಿತನದ ಕೃತಿ. ಋಣಿಯಾದವನು ಅದನ್ನು ತೀರಿಸುವ ಸಲುವಾಗಿ ತನ್ನ ಸ್ವತ್ತನ್ನು ನ್ಯಾಸಧಾರಿಗೆ ಅಥವಾ ನ್ಯಾಸಧಾರಿಗಳಿಗೆ ಹಸ್ತಾಂತರಿಸುವುದು. ತನ್ನ ಸ್ವತ್ತನ್ನು ಮೋಸದ ಉದ್ದೇಶದಿಂದ ವರ್ಗಾವಣೆ ಮಾಡುವುದು, ತನ್ನ ಸಾಲಿಗರ ಹಿತಕ್ಕೆ ಧಕ್ಕೆ ಉಂಟಾಗುವ ರೀತಿಯಲ್ಲಿ ಅಥವಾ ಅವರ ಪೈಕಿ ಯಾರಿಗಾದರೂ ಪಕ್ಷಪಾತವಾಗುವ ರೀತಿಯಲ್ಲಿ ಏನಾದರೂ ಕೃತಿ ಎಸಗುವುದು, ತನ್ನ ಋಣಗಳನ್ನು ಪಾವತಿ ಮಾಡಲಾರೆನೆಂದು ಅವನು ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸುವುದು, ತನ್ನ ಋಣಗಳ ಪಾವತಿಯನ್ನು ನಿಲಂಬನಗೊಳಿಸಿರುವುದಾಗಿ (Suspend) ಅಥವಾ ನಿಲಂಬನಗೊಳಿಸಲಿರುವುದಾಗಿ ತನ್ನ ಸಾಲಿಗರಲ್ಲಿ ಯಾರಿಗಾದರೂ ತಿಳಿವಳಿಕೆ ನೀಡುವುದು, ಇತ್ಯಾದಿ.

**Act of God :** ದೈವ ಕೃತಿ. ಮಾನವ ಕೈವಾಡವೆಂದು ಅಥವಾ ಮನುಷ್ಯಕೃತವೆಂದು ಹೇಳಲಾಗದ ಯಾವುದೇ ಘಟನೆ; ಆದ್ದರಿಂದ ಮುಂದಾಗಿ ಅರಿಯಲಾಗದ್ದು. ಇದರ ಉಲ್ಲೇಖ ಸಾಮಾನ್ಯವಾಗಿ ಭರಾವಣೆ ಪತ್ರದಲ್ಲಿ (Bill of Lading) ಇರುತ್ತದೆ. ಉದಾ: ಚಂಡಮಾರುತ, ವಿಮಾನಾಪಘಾತ.

**Acting Allowance :** ಕಾರ್ಯಭಾರಿ ಭತ್ಯ. ತನಗಿಂತ ಮೇಲಿನ ಸ್ಥಾನದ ಉದ್ಯೋಗಿಯ ಕಾರ್ಯವನ್ನು ಅವನ ಗೈರುಹಾಜರಿಯಲ್ಲಿ ನಿರ್ವಹಿಸುವುದಕ್ಕೆ ಸಲ್ಲುವ ಭತ್ಯ.

**Acting in good faith :** ಸದ್ಭಾವದಿಂದ ವರ್ತಿಸುವುದು, ನಡೆದುಕೊಳ್ಳುವುದು, ಒಂದು ಕಾರ್ಯವನ್ನು ನಿರ್ವಹಿಸುವುದು. ಚೆಕ್ಕು ಅಥವಾ ಬೇರೆ ಯಾವುದೇ ಪರಕ್ರಾಮ್ಯ ಸಂಲೇಖದ ಪರಕ್ರಾಮಣ ಅಥವಾ ಪಾವತಿಗೆ ಸಂಬಂಧಿಸಿದಂತೆ ಈ ಪದವನ್ನು ಬಳಸಲಾಗುತ್ತದೆ. ಆ ಸಂಲೇಖನಕ್ಕೆ ಸಂಬಂಧಿಸಿದ ಯಾವುದೇ ವ್ಯಕ್ತಿಯ ಹಕ್ಕಿನ ವಿಚಾರದಲ್ಲಿ ಯಾವುದೇ ಲೋಪವಿದೆ ಎಂಬುದನ್ನು ತಿಳಿಯದೆ, ಹಾಗೆಂದು ಊಹಿಸಲು ಕಾರಣವಿಲ್ಲದೆ, ಅದನ್ನು ನಂಬುವುದು.

**Acting in discretion :** ಸ್ವವಿವೇಚನೆಯಿಂದ ಕೆಲಸ ಮಾಡುವುದು, ವರ್ತಿಸುವುದು, ನಡೆದುಕೊಳ್ಳುವುದು, ಕ್ರಮ ತೆಗೆದುಕೊಳ್ಳುವುದು.

**Acting in official capacity :** ಅಧಿಕಾರಯುತವಾಗಿ, ಅಧಿಕಾರ ಸ್ಥಾನದಿಂದ ಮಾಡುವುದು.

**Active consideration :** ತೀವ್ರ ಪರಿಶೀಲನೆ.

**Act of Honour :** ನೋಡಿ—Acceptance for Honour

**Action :** ಕಾರ್ಯ, ವ್ಯವಹರಣೆ. ಒಂದು ಹಕ್ಕಿನ ಜಾರಿಗಾಗಿ ಅಥವಾ ರಕ್ಷಣೆಗಾಗಿ, ದೋಷವೊಂದರ ನಿವಾರಣೆಗಾಗಿ, ಅಥವಾ ಅಪರಾಧವೊಂದರ ಶಿಕ್ಷೆಗಾಗಿ ನ್ಯಾಯಿಕ ವ್ಯವಹರಣೆ.

**Active Bonds :** ಬಿಡುಗಡೆಯ ದಿನದಾಚೆಗೆ ನಿಶ್ಚಿತ ಬಡ್ಡಿಯನ್ನು ಪೂರ್ವನಿಶ್ಚಿತ ಅವಧಿಯಲ್ಲಿ ತರುವಂಥ ಪತ್ರಗಳು.

**Active circulation :** ದೇಶದ ಕೇಂದ್ರೀಯ ಬ್ಯಾಂಕ್ (ನಮ್ಮಲ್ಲಿ ರಿಸರ್ವ್ ಬ್ಯಾಂಕ್) ಅಥವಾ ಸರ್ಕಾರ ಬಿಡುಗಡೆ ಮಾಡಿದ, ಚಲಾವಣೆಯಲ್ಲಿರುವ, ವಿವಿಧ ಮೌಲ್ಯವರ್ಗಗಳ ನೋಟುಗಳು, ನಾಣ್ಯಗಳು. ರಿಸರ್ವ್‌ಬ್ಯಾಂಕಿನ ಬ್ಯಾಂಕಿಂಗ್ ವಿಭಾಗದಲ್ಲಿ ಮೀಸಲಿನ ಅಂಗವಾಗಿ ಇಟ್ಟುಕೊಳ್ಳಲಾದ ಹಣ ಇದರಲ್ಲಿ ಸೇರುವುದಿಲ್ಲ.

**Active partner :** ಸಕ್ರಿಯ ಪಾಲುದಾರ. ಪಾಲುದಾರಿಕೆ ಸಂಸ್ಥೆಯಲ್ಲಿ ಬರಿಯ ಹಣ ತೊಡಗಿಸುವುದೇ ಅಲ್ಲದೆ, ವ್ಯವಹಾರ ನಿರ್ವಹಣೆಯಲ್ಲೂ ಪ್ರವೃತ್ತನಾಗಿರುವ ಪಾಲುದಾರ.

**Act of Commission and Omission :** ದೋಷ ಲೋಪ ಕೃತ್ಯಗಳು.

**Actual Cost :** ವಾಸ್ತವ ಬೆಲೆ

**Actuals and Targets :** ವಾಸ್ತವಗಳು ಮತ್ತು ಗುರಿಗಳು.

**Actuary :** (ಅ) ಉಳಿತಾಯ ಬ್ಯಾಂಕಿನ ಮುಖ್ಯಸ್ಥ. (ಆ) ವಿಮಾಗಣಕ. ವಿಮೆಗೆ ಸಂಬಂಧಿಸಿದ ಲೆಕ್ಕಾಚಾರಗಳಲ್ಲಿ ಪ್ರವೀಣ.

**Adjudication in Bankruptcy :** ದಿವಾಳಿಯೆಂದು ನಿರ್ಣಯ (ನ್ಯಾಯಾಲಯದಿಂದ)

**Adjudication of Stamps :** ಸ್ಟಾಂಪು ನಿರ್ಣಯ. ಯಾವ ಮೊತ್ತದ ಸ್ಟಾಂಪನ್ನು ಉಪಯೋಗಿಸಬೇಕೆಂಬ ನಿರ್ಣಯ.

**Administration order :** ಯಾವುದೇ ಸ್ವತ್ತಿನ ಯೋಗ್ಯ ಆಡಳಿತಕ್ಕಾಗಿ ಆದೇಶ.

**Administrator :** ಆಡಳಿತಗಾರ. ಪರಿಪಾಲಕ. ಮೃತಿಹೊಂದಿದವನು ಯಾವುದೇ ಉಯಿಲನ್ನು ಬರೆಯದೆ ಹೋದ ಪಕ್ಷದಲ್ಲಿ ಆತನ ಸ್ವತ್ತನ್ನು, ಅವುಗಳ ಬಗ್ಗೆ ನ್ಯಾಯಾಲಯ ಖಚಿತ ನಿರ್ಣಯ ನೀಡುವವರೆಗೆ, ನೋಡಿಕೊಳ್ಳಲು ನ್ಯಾಯಾಲಯ ನೇಮಿಸುವ ವ್ಯಕ್ತಿ. ನಿರ್ಣಯ ಹೊರಬೀಳುವ ತನಕ ಬ್ಯಾಂಕುಗಳು ಮೃತನ ಆಸ್ತಿಯನ್ನು ವ್ಯವಹರಣಯೋಗ್ಯವೆಂದು ಭಾವಿಸುವುದಿಲ್ಲ.

**Admittance :** ಪ್ರವೇಶಾನುಜ್ಞೆ.

**Adoption :** ದತ್ತು ಸ್ವೀಕಾರ.

**Ad Referendum** ಇನ್ನಷ್ಟು ಪರಿಶೀಲಿಸಬೇಕಾದುದು,

**Ad Valorem :** ಯಥಾಮೌಲ್ಯ. ಮೌಲ್ಯಾನುಸಾರ.

**Advance :** ಮುಂಗಡ. ಸಾಲ.

**Advancement :** ಅಗ್ರತೋದಾನ. ಯಾವುದೇ ಟ್ರಸ್ಟ್ ಅಥವಾ ನ್ಯಾಸದ ನಿಧಿಯಿಂದ ಫಲಾನುಭವಿಯ ಹಿತಸಾಧನೆಗಾಗಿ ಅಥವಾ ಏಳಿಗೆಗಾಗಿ ನೀಡುವ ಹಣ.

**Advance Note :** (ಅ) ಮುನ್ಸೂಚನಾಲೇಖ. (ಆ) ಮುಂಗಡ ಪತ್ರ. ನಾವಿಕರಿಗೆ ಕೆಲಸಕ್ಕೆ ಹಾಜರಾಗುವ ಮುನ್ನವೇ ಕೊಡಲಾಗುವ, ಹಡಗು ಹೊರಟ ಮೂರು ದಿನಗಳ ಅನಂತರ ಅದರಲ್ಲಿ ಸೂಚಿಸಿರುವವನಿಗೆ ಹಣ ಪಾವತಿ ಮಾಡಬೇಕಾದ, ಪತ್ರ. ನಾವಿಕ ಸಾಮಾನ್ಯವಾಗಿ ತನ್ನ ಒಂದು ತಿಂಗಳ ವೇತನಕ್ಕೆ ಈ ಪತ್ರ ಪಡೆಯುತ್ತಾನೆ.

**Advance Against Real Estate :** ಸ್ಥಿರಸ್ವತ್ತಿನ ಆಧಾರದ ಮೇಲೆ ಸಾಲ, ಮುಂಗಡ.

**Advice :** ತಿಳಿವಳಿಕೆ ಪತ್ರ. ಬ್ಯಾಂಕು ಇತರ ಬ್ಯಾಂಕುಗಳೊಡನೆ ಅಥವಾ ತನ್ನ ಖಾತೆದಾರರೊಡನೆ ನಡೆಸಿದ ವ್ಯವಹಾರದ ಬಗ್ಗೆ, ಆ ವ್ಯವಹಾರದ ಅನಂತರ ಅದನ್ನು ಸಂಬಂಧಪಟ್ಟವರಿಗೆ ತಿಳಿಸುವ ಪತ್ರ.

**Advise Fate :** ಪಾಡನ್ನು ತಿಳಿಸು. ಚೆಕ್ಕು ಅಥವಾ ಹುಂಡಿಯನ್ನು ವಸೂಲಿಗಾಗಿ ಕಳುಹಿಸಿದಾಗ ಆ ಚೆಕ್ಕಿನ ಲೇಖಕನ ಅಥವಾ ಹುಂಡಿಯ ಸ್ವೀಕರ್ತನ ಲೆಕ್ಕದಲ್ಲಿ ಸಾಕಷ್ಟು ಶಿಲ್ಕು ಇದೆಯೆ, ಚೆಕ್ಕು ಪಾವತಿಯಾಗಿದೆಯೆ ಎಂದು ಮುಂತಾಗಿ ತಿಳಿಸಬೇಕೆಂದು ಪಾವತಿದಾರ ಬ್ಯಾಂಕಿಗೆ ಕೋರಿಕೆ.

**Affidavit :** ಪ್ರಮಾಣಪತ್ರ. ಒಬ್ಬ ವ್ಯಕ್ತಿಯಿಂದ ಪಡೆದ ಹೇಳಿಕೆ. ಇದಕ್ಕೆ ಅವನು ಸ್ವಇಚ್ಛೆಯಿಂದ ಸಹಿ ಹಾಕಿರುತ್ತಾನೆ, ಇದನ್ನು ದೃಢೀಕರಿಸಿರುತ್ತಾನೆ, ಅಥವಾ ಪ್ರಮಾಣಿಸಿರುತ್ತಾನೆ.

**Affreightment :** ಸರಕು ಸಾಗಣೆ. ಸಾರಿಗೆ ಶುಲ್ಕಕ್ಕೆ ಪ್ರತಿಯಾಗಿ ಸರಕು ಸಾಗಿಸಲು ಹಡಗಿನ ಮಾಲೀಕ ಮಾಡಿಕೊಳ್ಳುವ ಒಪ್ಪಂದವನ್ನು ಸರಕು ಸಾಗಣೆ ಕರಾರು ಎಂದು ಕರೆಯಲಾಗುತ್ತದೆ.

**After Hours :** ವೇಳಾನಂತರ, ಬ್ಯಾಂಕಿನ ವ್ಯವಹಾರದ ವೇಳೆ ಮುಗಿದ ಅನಂತರ ವಿಶೇಷ ಗ್ರಾಹಕರಿಗಾಗಿ ದೈನಿಕ ವ್ಯವಹಾರವನ್ನು ನಡೆಸುವುದು.

# ಕರ್ನಾಟಕ ವೃತ್ತರಚನೆಗಾಗಿ

**ಬ್ಯಾಂಕ್ ನೌಕರರಿಂದ ಉಪವಾಸ ಸತ್ಯಾಗ್ರಹ**

ಭಾರತೀಯ ಸ್ಟೇಟ್ ಬ್ಯಾಂಕಿನ ಸ್ಥಳೀಯ ಮುಖ್ಯ ಕಛೇರಿಯೊಂದನ್ನು ಕರ್ನಾಟಕ ರಾಜ್ಯಕ್ಕೆ ಪ್ರತ್ಯೇಕವಾಗಿ ಬೆಂಗಳೂರಿನಲ್ಲಿ ತೆರೆಯಬೇಕೆಂಬ ಬೇಡಿಕೆ ಇದೀಗ ಸರ್ವಸಮ್ಮತ. ಬೆಂಗಳೂರಿನಲ್ಲಿ ಸ್ಟೇಟ್ ಬ್ಯಾಂಕಿನ ಸ್ಥಳೀಯ ಪ್ರಧಾನ ಕಛೇರಿಯೊಂದನ್ನು ತೆರೆಯಬೇಕೆಂಬ ಬೇಡಿಕೆ ಮೂಲತಹ ನೌಕರರದಾಗಿದ್ದರೂ—ಇಂದು ಅದು ರಾಜ್ಯದ ಬೇಡಿಕೆಯಾಗಿದೆ. ಆಡಳಿತ ಕಛೇರಿಯನ್ನು ತೆರೆಯುವಿಕೆಯಿಂದ ಇತರ ರಾಜ್ಯಗಳಲ್ಲಿ ಅನೇಕ ಬ್ಯಾಂಕ್ ಶಾಖೆಗಳನ್ನು ತೆರೆದಿದ್ದಾರೆ. ಆಯಾ ರಾಜ್ಯಗಳ ಸ್ಥಳವಂದಿಗರಿಗೆ ಉದ್ಯೋಗ—ಬಡಬಗ್ಗರಿಗೆ ಸಾಲ ಸೌಲಭ್ಯ ಕೃಷಿ ಹಾಗು ಕೈಗಾರಿಕೆಗೆ ವಿಶೇಷ-ಯೋಜಿತ ಧನಸಹಾಯ—ಹೀಗೆ ಹಲವಾರು ಆರ್ಥಿಕ ಯೋಜನೆಗಳು ಅಸ್ತಿತ್ವಕ್ಕೆ ಬಂದು—ಇತರ ರಾಜ್ಯಗಳ ವಿಕಾಸ ಹಾಗೂ ಬೆಳವಣಿಗೆ ಬಹು ಚೆನ್ನಾಗಿ ಆಗಿರುವುದನ್ನು ನಾವು ಮನಗಂಡಿದ್ದೇವೆ.

ಅಂತಹ ಒಂದು ಆರ್ಥಿಕ ಕಾರ್ಯಕ್ರಮ—ಕರ್ನಾಟಕಕ್ಕೆ-ಭಾರತೀಯ ಸ್ಟೇಟ್ ಬ್ಯಾಂಕಿನಿಂದ ಏಕೆ ಆಗಬಾರದು? ಎಂದು_ಇಂದು ಎಲ್ಲರ ಪ್ರಶ್ನೆ. ಈ ಬೇಡಿಕೆಯು ಎಲ್ಲರ ಮನ ಮುಟ್ಟಲಿ—ಸ್ಟೇಟ್ ಬ್ಯಾಂಕ್ ಇದರ ಬಗ್ಗೆ ಬೇಗ ಒಂದು ತೀರ್ಮಾನಕ್ಕೆ ಬರಲಿ ಎಂದು "ಬ್ಯಾಂಕಿನ ಸಿಬ್ಬಂದಿ ಸಮಿತಿಯು" ಕಾರ್ಯಕರ್ತರು ಸೆಪ್ಟೆಂಬರ್ 18 ಮತ್ತು 19ರಂದು ಒಂದು ದಿನದ ಉಪವಾಸ ಮುಷ್ಕರವನ್ನು ಹೂಡಿದ್ದರು. ಈ ಮುಷ್ಕರಕ್ಕೆ ಬಂದ ಬೆಂಬಲ ಅನುಕರಣೀಯ ಮತ್ತು ಉತ್ತೇಜನಾಪೂರ್ಣ. ಸಂಸತ್ ಸದಸ್ಯರು—ಮಾಜಿ ಮಂತ್ರಿಗಳು—ಶಾಸಕರು_ಸಾಹಿತಿಗಳು—ಆಡಳಿತಾಧಿಕಾರಿಗಳು—ನ್ಯಾಯ ಮೂರ್ತಿಗಳು—ಚಳುವಳಿ ನಾಯಕರು—ಮತ್ತು ಅನೇಕ ಸಂಘ-ಸಂಸ್ಥೆಗಳು-ಮುಂದಾಳುಗಳು ಬಂದು, "ಈ ಮುಷ್ಕರ ಒಂದು ವಿಶೇಷವಾದದ್ದು—ಜನತೆಯ ಬೇಡಿಕೆಯನ್ನು ತಮ್ಮ ಬೇಡಿಕೆಯನ್ನಾಗಿ ಮಾಡಿ ಕೊಂಡು—ಕಾರ್ಮಿಕ ಚಳುವಳಿಗೆ ಒಂದು ತಿರುವು ಕೊಡುತ್ತಿರುವ ಮುಷ್ಕರವೆಂದು" ಕರೆದು ಬೆಂಬಲ ಸೂಚಿಸಿದ್ದಾರೆ. ಬ್ಯಾಂಕ್ ಗದ್ದುಗೆಯಲ್ಲಿ ಕುಳಿತು ಆಳುವ ಜನ ರಾಜ್ಯದ ಜನದ ಮನದ ಆಳವನ್ನು ಬೇಗ ಅರಿತರೆ ಎಲ್ಲರಿಗೂ ಒಳಿತು.

ವರದಿ: **ಚೋ. ನಂಜಪ್ಪ**

---

# ಕರ್ನಾಟಕ ರಾಜ್ಯದ ಭವ್ಯ ಭವಿಷ್ಯದ ನಾಂದಿ

ಈ ಹೊಸವರ್ಷ ಕರ್ನಾಟಕ ರಾಜ್ಯಕ್ಕೊಂದು ಹೊಸ ಹುರುಪು ತುಂಬಿದೆ. ಇದೀಗ ಅಧಿಕಾರ ವಹಿಸಿಕೊಂಡಿರುವ ಹೊಸ ಮಂತ್ರಿಮಂಡಲದ ಜನಹಿತ ಚಿಂತನೆಗೆ ಅದು ಸಮಾಜದ ಸರ್ವಾಂಗೀಣ ಅಭಿವೃದ್ಧಿಗೆ ಹಾಕಿಕೊಂಡಿರುವ ವ್ಯಾಪಕ ಕಾರ್ಯಕ್ರಮಗಳೇ ಸಾಕ್ಷಿ.

* * * *

೨೦ ಅಂಶಗಳ ಕಾರ್ಯಕ್ರಮವನ್ನು ಹೆಚ್ಚು ಪರಿಣಾಮಕಾರಿಯಾಗಿ, ವ್ಯಾಪಕವಾಗಿ ಅನುಷ್ಠಾನಕ್ಕೆ ತರುವುದು.

* * * *

ನಿತ್ಯ ಜೀವನಕ್ಕೆ ಅಗತ್ಯವಾದ ವಸ್ತುಗಳು ಜನಸಾಮಾನ್ಯರಿಗೆ, ನ್ಯಾಯಬೆಲೆಯಲ್ಲಿ ದೊರಕುವಂತೆ ತೀವ್ರಕ್ರಮ.

* * * *

ಭೂ ಸುಧಾರಣೆ ಕಾರ್ಯಕ್ರಮವನ್ನು ಶೀಘ್ರವಾಗಿ ಕಾರ್ಯಗತಗೊಳಿಸಲು ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ಭೂನ್ಯಾಯ ಮಂಡಲಿಗಳು.

* * * *

ಹೆಚ್ಚುವರಿ ಭೂಮಿ ಹಂಚಿಕೆ ಹಾಗೂ ಹಂಚಿಕೆಯಾದವರಿಗೆ ಭೂ ಒಡೆತನದ ಹಕ್ಕು ದೊರೆಯುವಂತೆ ಮಾಡಲು ಆದ್ಯತೆ.

* * * *

ವಿಜಯನಗರ ಉಕ್ಕಿನ ಕಾರ್ಖಾನೆ ಯೋಜನೆಗೆ ಪ್ರಾಮುಖ್ಯತೆ.

* * * *

ಕಡ್ಡಾಯ ಶಿಕ್ಷಣದ ವಯೋಗುಂಪಿನ ನೂರಕ್ಕೆ ನೂರರಷ್ಟು ಮಕ್ಕಳು ಶಾಲೆಗೆ ಸೇರುವಂತೆ ಕ್ರಮ.

* * * *

ರಾಜ್ಯದ ಎಲ್ಲ ಪ್ರದೇಶಗಳಲ್ಲೂ ಕುಡಿಯುವ ನೀರಿನ ಪೂರೈಕೆಗೆ ಆದ್ಯತೆ.

## ಕರ್ನಾಟಕ ಸರ್ಕಾರದ

**ವಾರ್ತಾ ಮತ್ತು ಪ್ರಚಾರ ಇಲಾಖೆಯಿಂದ**

**ಪ್ರಕಟಣೆ**

## ಪುಣ್ಯ ದಿನಾಚರಣೆ

ಬ್ಯಾಂಕಿನಲ್ಲಿ ಅಪಾಯದ ಕರೆಗಂಟೆಗಳ ಸ್ವಿಚ್ಚುಗಳು ಕೋಶವಿಭಾಗದ ಹಲವೆಡೆಗಳಲ್ಲಿ ಇರುವುದು ಎಲ್ಲರಿಗೂ ತಿಳಿದ ವಿಷಯ. ಇವುಗಳ ಉಪಯೋಗ ಬಹುಮಟ್ಟಿಗೆ ಇರುವುದಿಲ್ಲ. ಆದರೆ ಹುತಾತ್ಮರ ದಿನದಂದು ಮೌನಾಚರಣೆಗೆ ಸೂಚನೆ ಕೊಡಲು ಇದನ್ನು ಉಪಯೋಗಿಸುವುದುಂಟು.

ಒಮ್ಮೆ ಹೀಗಾಯಿತು:

ಅಂದು ಹನ್ನೊಂದು ಗಂಟೆಯ ಸಮಯದಲ್ಲಿ ಅಪಾಯ ಸೂಚಕ ಗಂಟೆಗಳು ಸದ್ದು ಮಾಡಿದವು. ಎಲ್ಲರೂ ವಿಸ್ಮಿತರಾಗಿ ಕೌಂಟರಿನತ್ತ ತಿರುಗಿದರು. ಅಲ್ಲಿ ನಾಲ್ಕು ಜನ ಗೆಳೆಯರು ಗಂಭೀರವದನರಾಗಿ ಮೌನಾಚರಣೆ ಮಾಡುತ್ತ ನಿಂತಿದ್ದರು. ಅವರನ್ನು ನೋಡಿ ಏನೂ ತಿಳಿಯದೆ, ನಾವು, ನಮ್ಮನ್ನು ನೋಡಿ ಇತರರು, ಒಟ್ಟಿನಲ್ಲಿ ಇಡಿಯ ಬ್ಯಾಂಕು, ಮೌನ ಸಾಗರದಲ್ಲಿ ಮುಳುಗಿತು. ಹರಟೆ ಕೊಚ್ಚುತ್ತ ಗಂಟೆಗಳನ್ನು ನಿಮಿಷವನ್ನಾಗಿಸಬಲ್ಲ ನಮಗೆ ಈ ಮೌನಾಚರಣೆಯ ನಿಮಿಷಗಳು ಯುಗಗಳ ಹಾಗೆ. ನಾನಂತೂ ಗಡಿಯಾರದ ಮೇಲೆಯೇ ದೃಷ್ಟಿಯನ್ನು ಕೇಂದ್ರಿಕರಿಸಿದ್ದೆ. ಮಾತಾಡಲು ಕಂಠ, ನಾಲಗೆಗಳು ತವಕಿಸುತ್ತಿವೆ; ಇನ್ನೊಂದು ಬಾರಿ ಗಂಟೆಯ ಸದ್ದು ಕೇಳಲು ಕಿವಿ ಕಾತರಿಸುತ್ತಿದೆ. ಮೂರು ನಿಮಿಷಗಳಾದರೂ ಸದ್ದೇ ಇಲ್ಲ. ಅನಂತರ ಅಂತೂ ಗಂಟೆ ಬಾರಿಸಿತು. ಇಡೀ ಬ್ಯಾಂಕು ಶಬ್ದಪಂಪ್ರಚಕ್ಕೆ ಹಾರಿತು. ಈಗಾದರೂ ಕಾರಣವನ್ನರಿಯಬೇಕೆಂಬ ತವಕ ನಮಗೆ. ಯಾರನ್ನು ಕೇಳಿದರೂ ಗೊತ್ತಿಲ್ಲ ಅನ್ನುವವರೇ. ಕೊನೆಗೆ ಸ್ವಿಚ್ಚನ್ನೊತ್ತಿದ ಸಹೋದ್ಯೋಗಿಯನ್ನು ಪತ್ತೆಹಚ್ಚಿ ಕೇಳಿದರೆ ಅವನು ರಹಸ್ಯ ವಾದ ಧ್ವನಿಯಲ್ಲಿ "ಯಾರಿಗೂ ಹೇಳುವುದಿಲ್ಲವೆಂದರೆ ಮಾತ್ರ ಹೇಳುತ್ತೇನೆ" ಎಂದ. ಆ ಭರವಸೆ ಯನ್ನು ಇತ್ತೆವು. ಆಗ ನಿಧಾನವಾಗಿ ಆತ ಹೇಳಿದ:

"ಇಂದಿಗೆ ನಮ್ಮ ಮುತ್ತಾತ ಸತ್ತು ನೂರು ವರ್ಷಗಳಾದುವಂತೆ. ಮನೆಯಲ್ಲಿ ನಮ್ಮಪ್ಪ ಹೇಳಿ ಕಣ್ಣೀರು ಹಾಕಿದಾಗ ಏನೂ ಅನಿಸಲಿಲ್ಲ. ಆದರೆ ಇಲ್ಲಿ ಬಂದೊಡನೆಯೇ ದುಃಖ ಉಕ್ಕೇರಿತು. ತಡೆಯ ಲಾರದೆ ಎರಡು ನಿಮಿಷ ದುಃಖವನ್ನು ಎಲ್ಲರೊಡನೆ ಹಂಚಿಕೊಳ್ಳಲೆಂದು ಸ್ವಿಚ್ಚೊತ್ತಿದೆ. ಈಗ ಸ್ವಲ್ಪ ಹಾಯೆನಿಸುತ್ತಿದೆ."

## ನಮೂನೆ IV

(ನಿಯಮ 8ನ್ನು ನೋಡಿ)

| | | | |
|---|---|---|---|
| 1. | ಪ್ರಕಟಣೆಯ ಸ್ಥಳ | .... | ಬೆಂಗಳೂರು-560 002 |
| 2. | ನಿಯತಕಾಲಿಕದ ಅವಧಿ | .... | ಅರ್ಧ ವಾರ್ಷಿಕ |
| 3. | ಮುದ್ರಕರ ಹೆಸರು<br>ರಾಷ್ಟ್ರೀಯತೆ<br>ವಿಳಾಸ | .... | ಶ್ರೀ ಎಂ. ಎಸ್. ಚಿಂತಾಮಣಿ<br>ಭಾರತೀಯ<br>ಈಸ್ಟರ್ನ್ ಪ್ರೆಸ್<br>ಮೋರ್ಜ್ಞಾರಿಯ ಇಂಡಸ್ಟ್ರಿಯಲ್ ಎಸ್ಟೇಟ್<br>ಬನ್ನೇರುಘಟ್ಟ ರಸ್ತೆ, ಬೆಂಗಳೂರು-560 029 |
| 4. | ಪ್ರಕಾಶಕರ ಹೆಸರು<br>ರಾಷ್ಟ್ರೀಯತೆ<br>ವಿಳಾಸ | .... | ಶ್ರೀ ಚೋ. ನಂಜಪ್ಪ<br>ಭಾರತೀಯ<br>ಪ್ರಧಾನ ಕಾರ್ಯದರ್ಶಿ, ಸಮನ್ವಯ ಸಮಿತಿ (ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು), ಭಾರತೀಯ ಸ್ಟೇಟ್ ಬ್ಯಾಂಕ್, 22, ಜಯಚಾಮ-ರಾಜ ಒಡೆಯರ್ ರಸ್ತೆ, ಬೆಂಗಳೂರು-560 002 |
| 5. | ಸಂಪಾದಕರ ಹೆಸರು<br><br>ರಾಷ್ಟ್ರೀಯತೆ<br>ವಿಳಾಸ | .... | ಶ್ರೀ ಎಚ್. ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್ (ಎಚ್ಚೆಸ್ಕೆ)<br>ಭಾರತೀಯ<br>41, 6ನೇ ಮುಖ್ಯ ರಸ್ತೆ, ಸರಸ್ವತೀಪುರಂ<br>ಮೈಸೂರು-570 009 |
| 6. | ಒಟ್ಟು ಬಂಡವಾಳದ ಶೇ. 1ಕ್ಕಿಂತ ಹೆಚ್ಚಿನ ಷೇರುಗಳನ್ನು ಹೊಂದಿರುವ ಷೇರುದಾರರ, ಅಥವಾ ಪಾಲುದಾರರ ಮತ್ತು ಪತ್ರಿಕೆಯ ಮಾಲೀಕರ ಹೆಸರು ವಿಳಾಸಗಳು. | | ಸಮನ್ವಯ ಸಮಿತಿ, (ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು) ಭಾರತೀಯ ಸ್ಟೇಟ್ ಬ್ಯಾಂಕ್, ಬೆಂಗಳೂರು ನಗರ ಶಾಖೆ, 22 ಜಯಚಾಮರಾಜ ಒಡೆಯರ್‌ರಸ್ತೆ ಬೆಂಗಳೂರು-2 |

ನಾನು, ಚೋ, ನಂಜಪ್ಪ, ಮೇಲ್ಕಾಣಿಸಿದ ವಿವರಗಳು ನನ್ನ ನಂಬಿಕೆ ಮತ್ತು ತಿಳಿವಳಿಕೆಯಂತೆ ನಿಜವಾದುದೆಂದು ಈ ಮೂಲಕ ಘೋಷಿಸುತ್ತೇನೆ.

ಸಹಿ: **ಚೋ. ನಂಜಪ್ಪ**
ಪ್ರಕಾಶಕನ ರುಜು

## ಕರ್ನಾಟಕದ ವಿಕಾಸ ಹಾಗೂ ಬೆಳವಣಿಗೆಗೆ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾದ ಸ್ಥಳೀಯ ಪ್ರಧಾನ ಕಛೇರಿಯೊಂದನ್ನು ಬೆಂಗಳೂರಿನಲ್ಲಿ ತೆರೆಯಬೇಕಾದ ಅವಶ್ಯಕತೆ ಇದೆ.

ಕರ್ನಾಟಕ ರಾಜ್ಯಕ್ಕೆ ಪ್ರತ್ಯೇಕವಾಗಿ ಬೆಂಗಳೂರಿನಲ್ಲಿ ಸ್ಥಳೀಯ ಪ್ರಧಾನ ಕಛೇರಿಯನ್ನು ತೆರೆಯುವುದರಿಂದ ಅನೇಕ ಪ್ರಯೋಜನಗಳು ಲಭಿಸುತ್ತವೆ. ಅವುಗಳಲ್ಲಿ ಕೆಲವನ್ನು ಹೆಸರಿಸುವೆವು:

(1) ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾದ ಹೆಚ್ಚು ಹೆಚ್ಚು ಶಾಖೆಗಳು ಕರ್ನಾಟಕದಲ್ಲಿ ತೆರೆಯಲ್ಪಡುವುವು.

(2) ರಾಜ್ಯದ ದುರ್ಬಲ ಹಾಗೂ ನಿರ್ಲಕ್ಷಿಸಲ್ಪಟ್ಟಿರುವ ಜನಾಂಗಕ್ಕೆ ಹೆಚ್ಚಿನ ಧನಸಹಾಯ.

(3) ಸ್ಥಳೀಯರಿಗೆ ಹೆಚ್ಚಿನ ಉದ್ಯೋಗಾವಕಾಶ.

(4) ರಾಜ್ಯದ ಪ್ರತಿ ಜಿಲ್ಲೆಗೂ ಯೋಜಿತ ಆರ್ಥಿಕ ಅವಕಾಶಗಳು.

(5) ಸ್ಥಳೀಯ ಬೇಡಿಕೆಗಳ ಮೇರೆಗೆ ಸಾಲಸೌಲಭ್ಯಗಳು.

(6) ರಾಜ್ಯ ಸರ್ಕಾರದೊಡನೆ ಬ್ಯಾಂಕಿನ ನೇರ ಹಾಗೂ ಸುಲಭ ಸಂಪರ್ಕಾವಕಾಶಗಳು.

(7) ವಿವಿಧ ಕ್ಷೇತ್ರಗಳಲ್ಲಿ ಪರಿಣತಿ ಹೊಂದಿದ ತಜ್ಞರಿಂದ ಕೂಡಿದ 'ಸ್ಥಳೀಯ ಮಂಡಳಿ' ಅಸ್ತಿತ್ವಕ್ಕೆ ಬಂದು ಬ್ಯಾಂಕಿಗೆ ಅಧಿಕಾರಾರೂಢ ಸಲಹಾ ಮಂಡಲಿಯಾಗಿ ಕೆಲಸಮಾಡುವುದು.

(8) ಬ್ಯಾಂಕಿನ ಕೇಂದ್ರ ಮಂಡಳಿಯಲ್ಲಿ ರಾಜ್ಯದ ಸ್ಥಳೀಯ ಮಂಡಳಿಯ ಮೂಲಕ ಕಾರ್ಯ ಸ್ಥಾನ ದೊರಕುವಂತಾಗುವುದು.

(9) ಬೆಂಗಳೂರಿನಲ್ಲಿ ಕರ್ನಾಟಕಕ್ಕೆ ಸೀಮಿತವಿರುವ ಸ್ಟೇಟ್ ಬ್ಯಾಂಕಿನ ಉದ್ಯೋಗ ನೇಮಕಾತಿ ಮಂಡಳಿಯೊಂದನ್ನು ಸ್ಥಾಪಿಸಲಾಗುವುದು.

(10) ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾದ ಸ್ಥಳೀಯ ಪ್ರಧಾನ ಕಛೇರಿಯನ್ನು ಬೆಂಗಳೂರಿನಲ್ಲಿ ತೆರೆಯುವುದರಿಂದ ಒಟ್ಟಾರೆ ಕರ್ನಾಟಕದ ಸರ್ವತೋಮುಖ ಬೆಳವಣಿಗೆಗೆ ಭದ್ರ ಬುನಾದಿ ಹಾಕಿದಂತೆ ಆಗುವುದು.

**ಕರ್ನಾಟಕ ವೃತ್ತ ತೆರೆಸಲು**

**ಭಾರತೀಯ ಸ್ಟೇಟ್ ಬ್ಯಾಂಕ್ ಸಿಬ್ಬಂದಿ ಸಮಿತಿ**

**ಸ್ಟೇಟ್ ಬ್ಯಾಂಕ್ ಕಟ್ಟಡ, ಸಂತ ಮಾರ್ಕ್ಸ್ ರಸ್ತೆ**

**ಬೆಂಗಳೂರು-೫೬೦ ೦೦೧**

No. MAG (2) PRB.DECL.155/80-81



EASTERN PRESS, BANGALORE 560 029